ಕಾವ್ಯ ನಲ್ಲನಲ್ಲೆಯ ವಸಂತ

ಕವಿತೆ, ಕಥೆ, ಕಾದಂಬರಿ, ಮಹಾಕಾವ್ಯ ಮೊದಲಾದಂತೆ ಇದುವರಗಿನ ನಿಯಮ ಚೌಕಟ್ಟುಗಳ ಮೀರಿ ಇಂದು ಸಾಹಿತ್ಯವು ಹೆಜ್ಜೆ ಇಡುತ್ತಿದೆ. ಸಹೃದಯ ಮನಸ್ಸು ಬರಿ ಓದುವಿಗೆ ತೊಡಗದೆ, ತನ್ನ ಬದುಕಿಗೆ ಸಾಹಿತ್ಯದ ಅನಿವಾರ್ಯತೆಯನ್ನು ಕಂಡುಕೊಳ್ಳುತ್ತಿದೆ.

ಇದುವರೆಗಿನ ಸಾಹಿತ್ಯವನ್ನೂ ಕೂಡ ಜೊತೆಯಲ್ಲಿರಿಸಿಕೊಂಡು, ಹೊಸ ರೀತಿಯಲ್ಲಿ ಅಧ್ಯಯನಕ್ಕೆ ತೊಡಗಿರುವ ನಾವುಗಳು ವರ್ತಮಾನದ ಎಲ್ಲಾ ಗ್ರಹಿಕೆಗಳನ್ನು ಮುಕ್ತ ವೇದಿಕೆಗಳಾಗಿ ಸ್ವೀಕರಿಸಿ, ಹೊಸ ಆಲೋಚನೆಗಳನ್ನು ಕಂಡುಕೊಳ್ಳುತ್ತಿದ್ದೇವೆ.

ನುಡಿಗಳು ಬದಲಾವಣೆಯಲ್ಲಿ ತೊಡಗಿವೆ. ಇಂದು ಬರಹ ಹಿರಿದಾಗುತ್ತಿದೆ. ಅದರ ಅಕ್ಷರಗಳು ವಜ್ರಗಳಾಗುತ್ತಿವೆ. ನೆನಪುಗಳು ಅತಿ ಬೇಗ ಮಾಸುವ ವೇಳೆ, ಅಳಿಸಬಹುದಾದ ಅಕ್ಷರಗಳನ್ನು ನೆನಪುಗಳಿಂದ ಅಳಿಸದಂತ ಉಳಿಸುವ ಸಾಹಿತ್ಯ ರಚನೆಯು ನಮ್ಮ ಮುಖ್ಯ ಜವಾಬ್ದಾರಿಯಾಗಿದೆ. ಇದು ಭೂತಕಾಲದ ಕನಸು. ವರ್ತಮಾನದ ಅನಿಸು. ಭವಿಷ್ಯತ್ತಿನ ಸಾಕ್ಷಿಪ್ರಜ್ಞೆ.

ಅಂಕುರ


ISBN 978-93-5773-793-7

# ನಲ್ಲನಲ್ಲೆಯ ವಸಂತ

## ಅಂಕುರ

ಒಲವಾಗುವ ಮನಸ್ಸಿನ ಬಾಳ್ವೆಯು
ಕಾಲ - ದೇಶ -ಲಿಂಗಗಳ ಮೀರಿ
ಹದವಾಗುವ
ಪ್ರಕೃತಿಯ ಪರಿಯೇ ನಲ್ಲ ನಲ್ಲೆಯ ವಸಂತ.
ಬದುಕು ಸಂಘರ್ಷಕ್ಕೆ ಸಿಲುಕುವುದಿಲ್ಲ. ನಮ್ಮ
ಆಸೆಗಳನ್ನು ವಿಸ್ತರಿಸಿಕೊಳ್ಳುತ್ತಾ ನಾವು ಅದರ
ಭಾಗವಾಗುತ್ತೇವೆ. ಈ ಬಹಿರಂಗದ
ತವಕಗಳನ್ನು ನಮ್ಮ ಅಂತರಂಗದಲ್ಲಿ
ಸೋಸಿ ಶುದ್ಧವಾಗಲು ಒಲವು ಬೇಕು. ಅದು
ಮನಸ್ಸಿನ ಧಮನಿಯಾಗಬೇಕು.



## ಕಾವ್ಯ

# ನಲ್ಲನಲ್ಲೆಯ ವಸಂತ

ಕವಿತೆ, ಕಥೆ, ಕಾದಂಬರಿ, ಮಹಾಕಾವ್ಯ ಮೊದಲಾದಂತೆ ಇದುವರೆಗಿನ ನಿಯಮ ಚೌಕಟ್ಟುಗಳ ಮೀರಿ ಇಂದು ಸಾಹಿತ್ಯವು ಹೆಜ್ಜೆ ಇಡುತ್ತಿದೆ. ಸಹೃದಯ ಮನಸ್ಸು ಬರಿ ಓದುವಿಗೆ ತೊಡಗದೆ, ತನ್ನ ಬದುಕಿಗೆ ಸಾಹಿತ್ಯದ ಅನಿವಾರ್ಯತೆಯನ್ನು ಕಂಡುಕೊಳ್ಳುತ್ತಿದೆ.

ಇದುವರೆಗಿನ ಸಾಹಿತ್ಯವನ್ನೂ ಕೂಡ ಜೊತೆಯಲ್ಲಿರಿಸಿಕೊಂಡು, ಹೊಸ ರೀತಿಯಲ್ಲಿ ಅಧ್ಯಯನಕ್ಕೆ ತೊಡಗಿರುವ ನಾವುಗಳು ವರ್ತಮಾನದ ಎಲ್ಲಾ ಗ್ರಹಿಕೆಗಳನ್ನು ಮುಕ್ತ ವೇದಿಕೆಗಳಾಗಿ ಸ್ವೀಕರಿಸಿ, ಹೊಸ ಆಲೋಚನೆಗಳನ್ನು ಕಂಡುಕೊಳ್ಳುತ್ತಿದ್ದೇವೆ.

ನುಡಿಗಳು ಬದಲಾವಣೆಯಲ್ಲಿ ತೊಡಗಿವೆ. ಇಂದು ಬರಹ ಹಿರಿದಾಗುತ್ತಿದೆ. ಅದರ ಅಕ್ಷರಗಳು ವಜ್ರಗಳಾಗುತ್ತಿವೆ. ನೆನಪುಗಳು ಅತಿ ಬೇಗ ಮಾಸುವ ವೇಳೆ, ಅಳಿಸಬಹುದಾದ ಅಕ್ಷರಗಳನ್ನು ನೆನಪುಗಳಿಂದ ಅಳಿಸದಂತೆ ಉಳಿಸುವ ಸಾಹಿತ್ಯ ರಚನೆಯು ನಮ್ಮ ಮುಖ್ಯ ಜವಾಬ್ದಾರಿಯಾಗಿದೆ. ಇದು ಭೂತಕಾಲದ ಕನಸು. ವರ್ತಮಾನದ ಅನಿಸು. ಭವಿಷ್ಯತ್ತಿನ ಸಾಕ್ಷಿಪ್ರಜ್ಞೆ.

**– ಅಂಕುರ**

ನಲ್ಲ ನಲ್ಲೆಯ ವಸಂತ – ಅಂಕುರ (ಡಾ. ರವಿಶಂಕರ್ ಎ.ಕೆ)
Nalla Nalleya Vasanta - Ankura (Dr. Ravishankar A K)

ಮೊದಲು ಅನಿಸಿದ್ದು ೨೦೧೨ – ಪೂರ್ಣ ಧ್ವನಿಸಿದ್ದು ೨೦೨೨

ಬರೆದದ್ದು ಮಲೆನಾಡಿನ ಕಾಡಿನಿಂದ ಕರಾವಳಿಯ ಕಡಲಿನವರೆಗೆ

ಪ್ರಕಟಣೆ : ೨೦೨೩
ಐ.ಎಸ್.ಬಿ.ಎನ್ ಸಂಖ್ಯೆ : ೯೭೮–೯೩–೫೭೭೩–೭೯೩–೭

ಪ್ರಕಟಣೆ :
ಜೀವನಪ್ರೀತಿ
ಅಳಿಲುಘಟ್ಟ
ಗುಬ್ಬಿ ತಾಲ್ಲೂಕು
ತುಮಕೂರು ಜಿಲ್ಲೆ
ಕರ್ನಾಟಕ – ೫೭೨೨೨೨

ಬೆಲೆ – ಉಚಿತ (ಅಧ್ಯಯನದ ನಂತರ ಅಭಿಪ್ರಾಯ ತಿಳಿಸಿ)
Impression : 2023
ISBN Number : 978-93-5773-793-7

Publication :
Jeevana Preeti
Alilughatta
Gubbi Taluk
Tumkur District
Karnataka - 572222
raviankura12@gmail.com



**ಓದಿಗೊಂದಿಷ್ಟು ಒಲವು**

ಒಲವು ಸವಿಯದ ಕವಿತೆ ಎಂದು ಎಲ್ಲರೂ ನಿರ್ಲಕ್ಷ್ಯ ತೋರುವ ಕಾಲದಲ್ಲಿ ಒಲವೇ ಸಾಕ್ಷಾತ್ಕಾರವೆಂದು ಮತ್ತೆ ನೆನಪಿಸುವ ಕವಿತೆಗಳು ಇಲ್ಲಿವೆ. ಇವು ಬರಿ ಕವಿತೆಗಳಾಗದೆ ಕಥೆ, ಟಿಪ್ಪಣಿ, ವ್ಯಾಖ್ಯಾನ ಹಾಗೂ ಗದ್ಯ ಸಮ್ಮಿಶ್ರವಾದ ಸುಗಂಧ ಸಾರ. ಇವುಗಳನ್ನು ಓದುವಾಗ ಕವಿಯನ್ನು ಕಳಚಿ ಓದಿ. ಆಗ ನಿಮ್ಮದೇ ಕವಿತೆಗಳಾಗಬಹುದು. ಒಲವು ಅನುಕರಿಸುವ ಪಥ್ಯವಲ್ಲ, ಅನುಭವಿಸುವ ಸತ್ಯ.

ನಾವು ಅನುಭವಿಸಬಹುದಾದ ಎಲ್ಲವೂ ಸತ್ಯ. ಅದುವೆ ನಿಜವಾದ ಕಾವ್ಯ. ಕರುಣೆ ಹುಟ್ಟಿಸುವ, ಆನಂದಗೊಳಿಸುವ ಅಕ್ಷರಗಳಲ್ಲಿ ಸ್ವ–ಅನುಭವ ಕಡಿಮೆ. ಈ ಸ್ವ–ಅನುಭವದಲ್ಲಿಯೇ ಸಖಿ ಭಾವ ಅಡಗಿದೆ. ಕಾಣುವ ಮನೋಜ್ಞಾನ ನಮ್ಮಲ್ಲಿ ಅರಳಬೇಕು.

ಈ ಕೃತಿಯೊಳಗೆ ನಿಮ್ಮದೇ ಭಾವನೆಗಳಿವೆ. ಪ್ರಯೋಗಕ್ಕೆ ಒಳಪಡಿಸುವ ಪ್ರತಿಪದವು ಪದಾರ್ಥವಾಗುವ ಜೀವಚೈತನ್ಯದಂತೆ ತಳೆದಿವೆ. ಹತ್ತಾರು ವರ್ಷಗಳ ಹದಗೊಳ್ಳದ ಬರೆಹಗಳಿದ್ದರೂ, ಅವುಗಳನ್ನು ಅಳಿಸುವುದು ಇಷ್ಟವಾಗಲಿಲ್ಲ. ಒಲವನ್ನು ಅಳಿಸಲಾಗದು. ಈ ಕೃತಿಯು ಈ ಕಾಲದ ಒಲವಾಗಿ ಮುಂದಿನ ದಿನಗಳಲ್ಲಿ ಮುಂದುವರೆದ ಹೊಸ ಸಮಕಾಲೀನ ಪ್ರೇಮವನ್ನು ಸಂಕಲಿಸಲಿದೆ. ಇಲ್ಲಿನ ಕವಿತೆಗಳು ಒಲವಿನ ಮಾತ್ರೆಗಳಾಗಿ ಜೀವ ಚೈತನ್ಯಗೊಳಿಸಬಹುದು. ಗದ್ಯ ಸ್ವರೂಪದ ಬರೆಹವು ಕವಿತೆಯ ಅರ್ಥವಲ್ಲ. ಭಾವಗಳ ಮುಖಾಮುಖಿ, ಹೊಸ ಆಲೋಚನೆಗಳ ದಿಕ್ಸೂಚಿ ಮೊದಲಾದಂತೆ ಕಾಣಬಹುದು. ಕವಿತೆಯೊಳಗೆ ಪ್ರವೇಶಮಾಡಿ, ನಿಮ್ಮ ಮನಸೂರಿನ ಕವಿತೆಗಳ ರಚನೆಗೆ ಸದಾ ಮಿಡಿಯಬಹುದು.

– ಅಂಕುರ

ಬಾಳ್ವೆಯಲಿ ಜೊತೆಯಾಗಿ
ಜ್ಞಾನದಲಿ ಹಿತವಾಗಿ
ಬೆಳಗು ನೀ ಎನ್ನ
ಸಖಿ ಶಾರದೆ

**ನನ್ನ ಸಖಿಶಾರದೆ ಕಾವ್ಯಳಿಗೆ ಈ ಕೃತಿ...**

ವಸಂತದ ಒಲವುಗಳು

## ಪುಟ್ಟ ಕವನ

ಕಲ್ಲಡಿಯ ನೆರಳಲ್ಲಿ

ಮುಳ್ಳಡಿಯ ಮನದಲ್ಲಿ

ಮೂಡಿತ್ತು ಹಾಡಿತ್ತು,

ಪುಟ್ಟ ಕವನ.

ನಾಡ ಬೆನ್ನೇರಿ ನಾಡಿಯೊಳ ಸೇರಿ

ಗೂಡಲ್ಲಿ ಮರಿಯಿಲ್ಲ

ಬೇಡಿತ್ತು, ಕಾಡಿತ್ತು,

ಪುಟ್ಟ ಕವನ.

ಬಾಡಿಲ್ಲ ನೆನ್ನೆಗಳು

ಇನ್ನೂ ಹಸಿದ ದಾರಿಯಲಿ

ಕಟ್ಟಿತ್ತು, ಮುಟ್ಟಿತ್ತು,

ಪುಟ್ಟ ಕವನ.

ಮನದಡಿಯ ಬೆಳಕಿನಲಿ

ನಲ್ಲ–ನಲ್ಲೆಯರು ಕೂಡಿ

ಮಲ್ಲೆಯಿತ್ತು, ಮಧುವಾಯ್ತು,

ಪುಟ್ಟ ಕವನ.

ಇರುತಾಣದ ನಿಲುಕಿನಲಿ

ಉಸಿರಸಿದ ಆ ಭಾವದ ಮೌನ

ಬಿಡು ಅಲ್ಲೆ, ಬಾ ನಲ್ಲೆ,

ವಸಂತಕೆ ನಾಚಿ ಇದು ನಿನ್ನ ಪುಟ್ಟ ಕವನ.

ಸಾಹಿತ್ಯದ ಮುಖ್ಯ ಭೂಮಿಕೆಯಾಗಿ ಕಾವ್ಯವು ಪ್ರಾರಂಭಗೊಂಡ ಇತಿಹಾಸವು ಇಂದು ಸಾಹಿತ್ಯ ಚರಿತ್ರೆಯನ್ನೇ ನಿರ್ಮಿಸಿದೆ. ಅದೊಂದು ಭಾವದ ಪರಿಧಿ. ಅದಷ್ಟೋ ಇತಿಹಾಸದ ಹಸಿವನ್ನು ಅನಂತವಾಗಿ ನೀಗಿಸುವ ಕಲ್ಪವೃಕ್ಷವಾಗಿ ಸಾಹಿತ್ಯ ಹಿರಿಯರ ನುಡಿಯಂತೆ ಎತ್ತಿಕೊಂಡವರ ಕೂಸು.

ಹೀಗೆ ಬದುಕಬೇಕು ಎಂಬ ಚರಿತ್ರೆಯಲ್ಲಿ ನಮ್ಮ ಸಂಸಾರ ಕಾವ್ಯಗಳು ಮೂಡಿವೆ. ಅದನ್ನು ವ್ರತದಂತೆ ಗ್ರಹಿಸಿರುವ ನಮ್ಮ ಸಮಾಜವು ಅದರಾಚೆಯ ಜಗತ್ತಿಗೆ ವ್ಯಾಖ್ಯಾನಕೊಡಲು ಇಷ್ಟಪಡುತ್ತಿಲ್ಲ. ಹಕ್ಕಿಯು ರೆಕ್ಕೆ ಬಂದಮೇಲೆ ಗೂಡಿನಾಚೆಯಾಕುವ ಹಕ್ಕಿಮರಿಯ ಕುರಿತು ಯಾವ ಸಂದೇಶಗಳು ಮೂಡಲಿಲ್ಲ. ಆದರೆ ಅದೊಂದು ಸ್ವಾತಂತ್ರ್ಯವೆಂಬ ಬಾಳ್ವೆಯ ದನಿಯೊಂದು ಸದಾ ಸಮಾಜದಲ್ಲಿ ಹೊಸ ಮಹತ್ತುಗಳನ್ನು ನಿರ್ಮಿಸುತ್ತಿದೆ.

**ಇಂತಲ್ಲ...**

ಬೆಳಕಾಗುವ ಭಾವದಲ್ಲಿ
ತಿಳಿವಿಲ್ಲದ ಭಿತ್ತಿ ನಾವು
ಜ್ಞಾನವೆಂಬ ತೈಲ ತಂದು
ಬದುಕ ಜ್ಯೋತಿ ಬೆಳಗುವ
ತಿಳಿಯ ತಿಳಿ ಬೆಳೆಯುವ
ಬೆಳೆದ ಗೂಡು ಅಳಿದರೇನು
ಕಾಳು ಕಡ್ಡಿ ಹುಡುಕುವ
ಹೊಸತು ಸೂರು ಮಾಡುವ
ಹೀಗೆ ಇರುವ ಗಾದೆ ಮಾತು
ಹೇಗೆ ಬರಲಿ ಸಹಿಸುವಾತು
ತಾಳುವುದೇ ನಮ್ಮ ನೆಮ್ಮದಿ

ನಲ್ಮೆಯೆಂಬುದು ಸಿದ್ಧ ಮಾದರಿಯಿಂದ ಜನಿಸಿದ ವ್ಯವಹಾರದ ವಿನೋದವಲ್ಲ. ಪರಸ್ಪರ ಪಾಲುದಾರವಾಗುವ ಸ್ವಯಂ ಸಂಪ್ರತಿ. ಅನಿಸಿದಂತೆ ಜನಿಸುವ ಮನದಿಂಗಿತವಾಗಿ, ಮೂಡಿ ಮನಸ್ಸನ್ನು ಮಧುರವಾಗಿ ಹದಮಾಡುತ್ತದೆ.

ಮನುಷ್ಯನು ಏಕಾಂಗಿಯಾಗುವ ಸ್ವಭಾವದಲ್ಲಿ ಸಾವನ್ನೂ ಮೀರಿದ ಶಕ್ತಿ ಅಡಗಿರುತ್ತದೆ. ಅಲ್ಲಿ ಪ್ರೇಮವು ಸ್ವಯಂ ಉತ್ಕರ್ಷವಾಗಿ ಕಾರ್ಯನಿರ್ವಹಿಸಿ, ಬೆಳಕು ಚೆಲ್ಲುತ್ತದೆ.

## ನಾಳೆಯೂರಿನ ನಲ್ಮೆಗಳು

ಬಣ್ಣದಾರತಿ ಕಣ್ಣಸೇರಿ

ಮಣ್ಣು ತೊನೆಯುವ ಸಣ್ಣ ಪೈರು

ಒಂಟಿಯೊರಟಿದೆ ನಂಟಿಗೆ

ನಾಳೆ ಎನ್ನುವ ಖಾಲಿ ಹಾಳೆಗೆ

ಕನಸು ಕಾಣುವ ಸುಖವಿದೆ.

ನಾ–ನೀ ಇರುವ ಮೌನವು

ಮಲಗಿ ಧ್ಯಾನವ ಬೇಡಿತು

ಬೆಳೆವ ಬದುಕನು ಕಾಡಿತು

ಉಸಿರು ಚೆಲ್ಲಿ ಹೃದಯ ತೀರಕೆ

ಎಲ್ಲೆಯೆಲ್ಲವ ಮೆಲ್ಲಿಮೆಲ್ಲನೆ

ಸೂತ್ರ ಸೂಸುವ ಸ್ತೂಪವೆಲ್ಲೋ

ಪಾತ್ರ ಮಧುಕರ ದೀಪ್ತವೆಲ್ಲೋ

ಮೌನ ಕರೆಯುವ ಕಾಲವು

ನೆನಪು ತೀರದ ಯಾನವು

ಬೆಳೆದು ಬೆಳಕನು ನೀಡಿತು

ಇದುವೆ ಪ್ರೇಮವು ಬಾ ವಸಂತಕೆ..

ವಸಂತಕೆ ಬರುವಾಗ ಯೌವನವನ್ನು ತರಬೇಕು. ತಂದ ಯೌವನವನ್ನು ಚಿರಚೈತನ್ಯವಾಗಿಸುವ ಹೊಣೆ ವಸಂತಕ್ಕಿದೆ. ಇಲ್ಲಿ ಪ್ರೇಮ ಎಂಬುದೇ ಅದೊಂದು ಶುದ್ಧ ಭಕ್ತಿ. ಆರಾಧನೆಯೇ ಅನುರಕ್ತಿ.

ಅಕ್ಷರವನ್ನು ಬಿತ್ತುವವಳು ಅನ್ನಕ್ಕೆ ಅರ್ಥ ತುಂಬುವ ಸತ್ವಶಾಲಿ.
ಆಕೆ ಮನಕ್ಕೆ ಬಂದರೆ ಶಾರದೆ. ಜ್ಞಾನಮೃತ ಉಣಿಸುವ ತಾಯಿ.

**ಮನದಿ ಬರುವ ಶಾರದೆ**

ಬರುವ ಶಾರದೆ ತೆರದ ಮನವು
ಅರಿವ ಹೃದಯದ ಸ್ವರವಿದೆ
ಬೆಳೆದ ಬಾನಿಗೂ ಮೊಳೆತ ಮೌನಕೂ
ವಿಶ್ವಾಸ ತುಂಬುವ ಮನವಿದೆ
ಅದರೊಳು ಪ್ರೇಮವೇ ತುಂಬಿದೆ.
ನಲ್ಲ-ನಲ್ಲೆಯ ಹೆಜ್ಜೆ ಸಪ್ಪಳ
ಮನೆಗೂ ಮನಕೂ
ವಸಂತ ತಾಗಿ ಹಿರಿ-ಕಿರಿಯರೆಲ್ಲಾ ಬಾಗಿ
ನಿನ್ನ ಎನ್ನ ವಸಂತಕೆ ಹರಸಿ ಹಾರೈಸಲಿ
ದಿನದ ಹಸೆಯಲಿ ಮನಸು ಬೆಸೆಯಲಿ
ದಿನಗಳೆಲ್ಲವೂ ಸಾಗಲಿ
ಮೈತ್ರಿಯೆನ್ನುವ ಭಾವ ದಾರಿಗೆ
ತಾಳ್ಮೆ ತಾಳುವ ಗುಣವೆ ಶಿರೋಮಣಿ
ಪೂಜಿಸೆಲ್ಲರ ಚಿತ್ರಿಕೆ
ನಿನ್ನ ಯೋಗದ ಎಲ್ಲ ಕ್ಷಣವನು
ಸೃಜಿಸಿ ಭಜಿಸುವ ಎಲ್ಲರೂ
ಮೌನ ತೀರದ ಪಯಣಕೆ

ಬಾ ಶಾರದೆ ವಸಂತಕೆ..

ಆಧುನಿಕಗೊಳ್ಳುವ ಪ್ರೇಮಯಾನದಲ್ಲಿ ಸೌಂದರ್ಯದ ಸಾರವನ್ನೇ ತುಂಬಿಕೊಂಡ ಜಗತ್ತು ಇದಾಗಿದೆ. ದೇಹದ ದಾಹಗಳಿಗೆ ಮೌಲ್ಯ ಬಂದಿರುವಾಗ ಅದೊಂದು ಅನಾಚಾರವಾಗಿ ಪ್ರಕೃತಿಗೊಳ್ಳುವ ಯಾವ ಕಾಲವೂ ಉಳಿದಿಲ್ಲ. ಇಂತಹ ಕಾಲವನ್ನು ನಲ್ಮೆಯಾಗಿಸುವ ಜವಾಬ್ದಾರಿಯು ಪರಸ್ಪರ ಅರ್ಥಮಾನ್ಯತೆಯ ಕೈಬುಟ್ಟಿಯಾಗಿದೆ. ಎಲ್ಲರಲ್ಲೂ ವಸಂತವು ಸೃಜಿಸಬೇಕಿದೆ.

ಮುಡಿಯು ಬಹಳ ಶ್ರೇಷ್ಟವಾದುದು. ಅದರ ಪುರಾಣ ಕಥೆಗಳು ಏನೇ ಇರಲಿ, ಸದ್ಯ ಅದೊಂದು ಸೌಂದರ್ಯದ ಬೆಳಕು. ಗಂಡಾಗಲಿ ಹೆಣ್ಣಾಗಲಿ ಮುಡಿಯಲ್ಲಿ ಕಾಣುವ ಸೊಗಸೇ ಬೇರೆ. ಹೆಣ್ಣಿಗಂತೂ ಅದೊಂದು ಕೇಶಕೋಶವಿದ್ದಂತೆ. ದಿನಕ್ಕೊಂದು ಅರ್ಥ, ಸೌಂದರ್ಯದ ತತ್ವಗಳ ಸೇರ್ಪಡೆಯಾಗುತ್ತಲೇ ಇರುತ್ತದೆ. ಪ್ರೀತಿಸಿದಂತೆಯೇ ನಿರ್ಲಕ್ಷಿಸುವ ಕುತೂಹಲವೂ ಹೌದು. ಇಂತಹ ಮುಡಿಯಲ್ಲಿ ಪ್ರೇಮದ ಮನಸ್ಸನ್ನು ನಿರ್ಮಿಸಿದರೆ ಏನೆಲ್ಲಾ ತೃಪ್ತಿ ಇರಬಹುದು. ಶಿವನಾಣೆ ನಾ ಕಾಣೆ.

## ಮುಡಿ ದೀವಿಗೆ

ಮಡದಿಯ ಮುಡಿಯೊಲ್ಲೊಂದು

ಮನಸು ಕಟ್ಟುವಾಸೆ

ಒಪ್ಪುವೆಯಾ ಮಾನಿನಿ

ಮುಡಿಯೊಲೊಂದು ನುಡಿಯ ಮೀಸಲು

ಮುಡಿಯ ಕಥೆಗಳು ಬೇಡ ಎನಗೆ

ಮುಡಿಯೇ ಜ್ಞಾನದ ಗೋಪುರ

ಕೇಶಕೋಶವೆ ದೋಷವೇನು

ಪ್ರೇಮಪಾಶವು ಆಗದಿರಲಿ

ಪ್ರೇಮಕೆ ನೀನೆ ಸೂತ್ರವು

ಮುಡಿಯೆಂದರೆ ಬರಿ ಕೇಶವಲ್ಲ

ಶಿರದ ಶ್ರೀ ತೇಜವು

ಬುದ್ಧಿಯ ಪ್ರಧಾನವು

ಶುದ್ಧಿಯ ನಿಧಾನವು

ನಂಬು ಮಾನಿನಿ ನಂಬಿಕೆಯನು ಬಾ ವಸಂತಕೆ..

ಅತಿ ಸೂಕ್ಷ್ಮವಾದ ಕೇಶದೊಳಗಿನ ಪಯಣದಂತೆ ಹೆಣ್ಣಿನ ಮನಸ್ಸು. ಅದನ್ನು ತಾಳ್ಮೆಯಿಂದ ಬಿಡಿಸಿದಷ್ಟೂ, ಸೊಗಸು, ಸೌಂದರ್ಯ ಹಾಗೂ ಆರೋಗ್ಯಕರ.

ಮಾಂಗಲ್ಯವೆಂದರೆ ಮಂಗಳವೆನ್ನಬಹುದು. ಅದೊಂದು ವಸ್ತುವಲ್ಲ. ಮಂಗಳವಾಗುವ ಮನಸ್ಸುಗಳನ್ನು ಹೊಂದುಮಾಡುವ ಕ್ರಿಯೆಯಲ್ಲಿ ಪರಸ್ಪರ ಅರ್ಥಸಾರ ವಿಚಾರಗಳಿರಬೇಕು ಅನಿಸುತ್ತದೆ. ಅದು ಅರ್ಥಮಾಡಿಕೊಂಡಾಗ ಪರಸ್ಪರಕ್ಕೆ ಮೌಲ್ಯ ಬರಬಹುದು.

**ಮಾಂಗಲ್ಯ ಗೀತೆ**

ತೀರದ ಎರಡು ಹೃದಯವನು

ಒಂದೇ ದೋಣಿಯಲಿ ತಂದು

ಒಪ್ಪಿಕೊಳ್ಳುವ ಹಲವು ಮಾತು

ಅನಿಯುತಿರುವ ಪ್ರೇಮ ಸವಿಯ

ಜೋಡಿತಂದು ಕೂಡಿ ತಳೆವ

ಭಾವ ಬರೆದ ಕವಿಯ ಮಾತು

ನಾಳೆ ಇರುವ ಸುಖವ ತಂದು

ನೆನಪು ಸವೆಸಿ ಬಾಳ್ವೆಯೆಂದು

ಅರ್ಥವಿತ್ತ ಸುಪ್ತ ಮಾತು

ಬೆಳಕು ಇರುವ ಎಲ್ಲ ಕ್ಷಣವು

ಹರುಷ ಎನುವ ನೀನಾ ವಸಂತದಿ

ಬಾ ವಸಂತಕೆ...

ಅನಿಯುತಿರುವ – ಪರಸ್ಪರ ಅನಿಸಿಕೆಗಳ ಮಿಲನ

ನೀನಾ – ನೀನು, ನಾನು

ಬದುಕು ಕಡಲಿನಂತೆ, ನೆಪದಲ್ಲಿ–ನೆನಪಲ್ಲಿ ಸಾಗುವ ದೋಣಿಯ ಪ್ರಯಾಣಕ್ಕೆ ಎರಡು ಜೀವಗಳನ್ನು ಜೊತೆಯಾಗಿಸುವ ಕರ್ತವ್ಯವೇ ಶ್ರೇಷ್ಠವಾದುದು. ಆ ಕಾರ್ಯ ಸಫಲಗೊಳ್ಳುವುದು ಮಂಗಳಕರವಾದ ಬದುಕಿನಲ್ಲಿ ಎನಿಸುತ್ತದೆ.

ಸಂಸಾರವೆಂಬುದೇ ಅರ್ಥಪೂರ್ಣ ಬದುಕಿನ ಪದ. ಎಲ್ಲಿ ಅರ್ಥವಾಗುವುದಿಲ್ಲವೋ ಅಲ್ಲಿ ಅನರ್ಥಗಳು ಸೃಷ್ಟಿಯಾಗುತ್ತವೆ. ಅರ್ಥವಾಗುವ ಕಾಯಕಲ್ಪಕ್ಕೂ ಸ್ವಲ್ಪ ಸಮಯಬೇಕು. ಅದು ಅತ್ಯಂತ ಪಾರದರ್ಶಕವಾಗಿರಬೇಕಾಗುತ್ತದೆ.

## ಮೌನ ಸಾಂಸಾರಿಕ ಕಾವ್ಯ

ಎಂದೊ ಜೊತೆಯಾಗುವ ನಾವು
ಎಂದೊ ಜೊತೆಯಾಗುವ ಸಾವು
ನಾನು ನೀನೇ ತಿಳಿದ ಬೆಳಗು
ನಾನು ನಿನ್ನೆಲ್ಲಾ ಒಳಗು
ಸಂಸಾರ ಕೂಡಿ ನಾವು
ನಿನ್ನೆಲ್ಲಾ ಅನಿಕೆ ನನ್ನೆಲ್ಲಾ ಬಯಕೆ
ಮಧು ಸಾರ ಕೂಡಿದಾವು
ನಗುವಲ್ಲೂ ಪಾಲು ನೋವಲ್ಲೂ ಮಹಲು
ಅದು ಇದುವೆ ನಿಜದ ಬಾಳು!
ನೆನಪಿರಲಿ ಕ್ಷಣವು ಈ ಎಲ್ಲಾ ಸುಖವು
ಹಾಡಿ ಬಂತಾಡಿ ಒಲವು
ಹೊಸ ಹೊಸತು ಗಾಳಿ ಬೀಸಿತ್ಯಾವ ದಾಳಿ

ಕ್ಷಮೆ ಬರಲಿ ತಪ್ಪು,
ಅರಿವಿರಲಿ ಒಪ್ಪು,
ತಿಳಿ ತಿಳಿದ ಸಾರ! ಅಳಿವಿರಲಿ ಭಾರ
ಅನುಮಾನವೇಕೆ ಘೋರ?
ಅಳಿತಪ್ಪುವ ಸಾರ!
ನಂಬಿಕೆಯ ನೆನಪೆ ಪ್ರೀತಿಯನು ಸುತ್ತಿ
ಮುಡಿ ಕಟ್ಟಲಿ ವಿಶ್ವಾಸದತ್ತ
ನೀ–ನಾ ಮನ ತಾಳ್ಮೆ ಗೂಡಿನ ಮೊತ್ತ
ಬರಲಿ ಸಂಸಾರ ನೌಕೆಗಳು ವಸಂತ ಪಯಣಕೆ...

ಅಂದುಕೊಳ್ಳುವುದು ಸುಲಭ ಬಿಡಿ. ಬದುಕುವುದಿದೆಯಲ್ಲ ಅದು ನಿಜವಾದ ಕಾರ್ಯ. ಕೆಡುಕಂತೆ ಒಳಿತನ್ನೂ ಅಂದುಕೊಳ್ಳಬಹುದು, ಬದುಕಬಹುದು. ಎಲ್ಲಿ ತ್ಯಾಗವಿರುತ್ತದೆಯೋ ಅಲ್ಲಿ ನಿಸ್ವಾರ್ಥವಿರುತ್ತದೆ. ಅಲ್ಲಿ ಸುಂದರವಾದ ಮನಸ್ಸು, ಅರ್ಥಪೂರ್ಣ ಬದುಕನ್ನು ಅನುಭವಿಸುತ್ತದೆ. ಅದನ್ನು ಸಹೃದಯರ ಜೀವನಪ್ರೀತಿ ಎನ್ನಬಹುದು. ಇದೊಂದು ಮೌನದ ಪಯಣ, ಶಬ್ದಗಳು ತನ್ನನ್ನು ಬಿತ್ತರಿಸಿಕೊಳ್ಳಲು ನಾಚುತ್ತವೆ.

## ಮನಸ್ಸು ಓದಲೇ ಬೇಕಾದ್ದದ್ದು...

### ಈ ಸಾಲು

ಅವಳು ಮೂಡುವ ಮುನ್ನ
ಈ ಸಾಲು ಮೂಡಿದವು
ಸಾಲಿನಂತೆಯೆ ಅವಳ ಚಿತ್ರಿಸಿ
ಸಾಲು ಸಾಲು ಬರೆದೆ
ಕವಿತೆಯಾಗದ ಸಾಲು
ಅವಳಲ್ಲಿ ತುಂಬಿ ಇರದೆ

### ಮಡಿಲಿನ ಪಾಲು

ಎಲ್ಲಾ ಹೆಣ್ಣಿನ ಮಡಿಲು, ತಾಯಿಯ ತೊಟ್ಟಿಲು
ಬೆಳೆವ ಕಂದನ ಕಂಗಳ ಹೊನಲು
ಮಡಿಲು, ಮುಗಿಲು, ತೀರದ ಕಡಲು
ಮಹಾ ಋಣದ ಪಾಲು.

### ಅವಳೆಂದರೆ...

ಅವಳೆಂದರೆ ಗರಿಕೆಯ ಹಾಗೆ
ಕಿತ್ತರೂ ಚಿಗುರುವ ಜೀವಂತ ಕಾವ್ಯ
ಕಸವೆಂದರೂ ಪೂಜಿಸುವ
ಅಲಂಕಾರ ದ್ರವ್ಯ

### ಹೆಣ್ಣು

ನೀ ಹೆಣ್ಣು, ಸಂಸಾರ ತಿಳಿಗೆ
ನಾ ಕಣ್ಣು, ಭೂ ಸಾರ ಫಳಿಗೆ,
ತಿಳಿನತ್ತು ತಿದಿ ಮಳಿಗೆ,
ಪಾಲುಂಡ ಪಕ್ವತೆಯ ಗುಡಿಗೆ.

ಶ್ರೀ ಎಂಬ ಗೌರವವು ಪುರುಷ ಲಕ್ಷಣವಾಗಿ ಸೂಚಿಸುತ್ತಲೇ ಅದರ ಮೌಲ್ಯ ಅಧಿಕಾರವಾಯಿತು. ಆದರೆ ಅದು ಲಕ್ಷ್ಮಿಯ ಹೆಸರಾಗಿ ಪುರುಷನನ್ನು ಶ್ರೀಮಂತಗೊಳಿಸಿದ ಪರಿಯಾಗಿದೆ. ಸಂಪತ್ತು ಲಕ್ಷ್ಮಿಯಲ್ಲ. ಸಂಪತ್ತಿನಂತಹ ಮನಸ್ಸಿನ ಸಂಕೇತವಾಗಿದೆ. ಶಾರದೆ ಬುದ್ದಿಯಾದರೆ, ಲಕ್ಷ್ಮಿ ಧೈರ್ಯವಾಗುತ್ತಾ ಹರಿಯ ಲೀಲೆಯ ಪುರಣ ಕಾವ್ಯಗಳು ಸಾರುತ್ತವೆ. ಪುರಾಣಗಳಲ್ಲಿರುವ ವಿಜ್ಞಾನವು ತೆರೆದಷ್ಟೂ ಮೌಲ್ಯದಂತಿರುವ ಸಂಶೋಧನಾ ತತ್ವಸಾರಗಳು.

## ಶ್ರೀ–ಮಂ–ಥಿ–ಕೆ

ಬಂಗಾರದಂತ ನಿನಗೆ ಬಂಗಾರವೇಕೆ?

ನಮ್ರತುಂಬಿದ ಮನಸ್ವರ್ಣ ಸಾಕೆ!

ಮೋಹವಿದ್ದರೆ ಬಿಟ್ಟು ಬಾ

ನೀ ಆಡಂಬರ ವನಕೆ

ನಾ ಇಲ್ಲವೆ ಬಂಗಾರದ ಮನಸು

ಮತ್ತೆ ಬೇರೆ ಬೇಕೆ!

ಕುಣಿವ ಲೋಕದ ಧಣಿವ ಹೊರಲೇಕೆ ನಾವು

ಕೂಡಿ ಕಟ್ಟುವ ನಾಳೆ ತಿಟ್ಟುಗಳ

ಉಳಿವಿನಾಳಕೆ ತೀರದಾ ತೀರ್ಥ..

ಬಾ ಮನವೆ ಬಾಳುವ, ಬಾಳೆನ್ನುವ

ಯಾರೂ ಅಳಿಸದ ಕಣ್ಣು ಸೇರಿ

ಸ್ವರ್ಣ ಚೌಕದ ಬಣ್ಣ ಚಿತ್ರವನು

ಕಟ್ಟೋಣ ಅಲ್ಲೇ ಬದುಕೆನ್ನುವ

ನಾಳೆಗಳ ಕಟ್ಟುವ ಬಂಗಾರದ ಮನವ

ಸಖಿ ಸುಖವ ಸಾಕೆನಿಸಿ

ಬಾ ವಸಂತಕೆ

ಬಾ ನಾನೀ ಅಲ್ಲಿರುವೆ

ನಮ್ಮದೇ ಹೃದಯ ಶ್ರೀಮಂಥಿಕೆ..

ನಾವು ಗಳಿಸುತ್ತೇವೆಯೋ, ಅಷ್ಟೇ, ಅತೃಪ್ತಿಯನ್ನು ಸಂಪಾದಿಸುತ್ತೇವೆ. ಇರುವ ಪುಣ್ಯವ ಆನಂದಿಸಿ, ಬಿಟ್ಟುಕೊಡುವ ಮನಸ್ಸು ನಮಗೆ ಬರುವುದಾದರೂ ಹೇಗೆ! ಸರಳತೆಯನ್ನು ಓದುತ್ತೇವೆ, ಗೌರವಿಸುತ್ತೇವೆಯೇ ಹೊರೆತು, ಅನುಕರಿಸುತ್ತಿಲ್ಲ. ಹಾಗಾದರೆ ಸರಳತೆ ಎಂಬುದು ಹೊರಗಿದೆ_ಒಳಗಲ್ಲ.

ಅನಿಸುವುದು ಸಹಜ, ಹನಿಯಾಗುವುದು ಮುಖ್ಯ. ಯಾವುದೇ ಹೆಣ್ಣು ಮನೆಯಿಂದ ಮನೆಗೆ ಸಾಗುವಾಗ ತನ್ನ ಭೂಮಿ, ಬೇರು ಎಲ್ಲವನ್ನೂ ಸಡಿಲಿಸಿ, ಕಿತ್ತು ಹೊಸ ಮನೆಯ ಹೊಸ ಪಾತಿಯಲ್ಲಿ ತನ್ನ ಜೀವಸಾಂದ್ರವನ್ನು ನೆಡುತ್ತಾಳೆ. ಆದರೆ, ಅವಳಿಗೆ ಬೇರು ಭದ್ರವಾಗುವ ತವಕ, ಬಯಕೆಗಳು ಕೆಲವು ವರ್ಷಗಳ ಭಯದಲ್ಲಿಯೇ ಸಾಗುತ್ತವೆ. ಇಲ್ಲಿ ಮನುಷ್ಯ ಸಂಬಂಧಗಳ ಸರಿಯಾದ ನೀರು ಗೊಬ್ಬರ ಹನಿತರೆ ಮಾತ್ರ, ಹೆಣ್ಣೆಂಬ ಗಿಡವು ವೃಕ್ಷವಾಗುವ, ಫಲತುಂಬುವ ವಸಂತ ಸಾಧ್ಯ.

**ಹನಿ–ಸಿತು**

ಹೊಸತನ ಬಯಕೆಯ ಎನಗೆ

ಹಸಿತನ ನೆಯ್ದಳು ವಾಸಂತಿ

ಮುಂಜಾನೆಯ ಶುಭ ಇವಳು

ಮೈಯೆಲ್ಲಾ ಚಿಗುರು ಹೂ ತೇರು

ನಾ ಅಲ್ಲಿ ಪಂಪನ ಕನಸು

ಎನ್ನಮ್ಮನ ಆಸಾಧ್ಯ ಮನಸು

ಬಿಚ್ಚು ಬಾ ನಿನ್ನ ವಿಶ್ವ ದಾಚೆಯ

ನೆತ್ತಿಯ ನೆರಳಿಂದ ಪ್ರೀತಿ ಬುತ್ತಿಯ

ನಾನು ನನ್ನಮ್ಮ ನಿನ್ನ ವಿತ್ತರ ಮಾನ್ಯ

ಸುತ್ತಿದರೆ ಸಾರ ವಸಂತದಲಿ ವಿಶ್ವ ಶೂನ್ಯ!.

“ಅವೊತ್ತು ಕನಸುಗಳೊಂದಿಗೆ ಎಚ್ಚರವಾದ ಸಖಿಗೆ, ತನ್ನತನದ ಅರಿವಿನ ಹುಡುಕಾಟಕ್ಕೆ ತೊಡಗಿದ್ದಳು. ಮುಖ ತೊಳೆದಷ್ಟೂ ಕಳೆ ಕಳೆದು ಕಳೆಗುಡುವ ಅವಳ ಮುಖದ ತೇಜಸ್ಸು ತಾನು ಇಂದು ಏನೋ ಪಡೆದುಕೊಳ್ಳುವ ಹಂಬಲದಲ್ಲಿದ್ದೇನೆ ಅನಿಸಿತು. ಕನ್ನಡಿಯ ಮುಂದೆ ನಿಂತಳು. ತನ್ನ ತಪ್ಪಿನ ಗೆರೆಗಳ ಅಳಿಸುತ್ತಾ ತನ್ನ ಸಹೃದಯ ಗೆರೆಗಳ ಕಂಡು ನಾಚಿ, ತಿರುಗುತ್ತಾಳೆ. ಸಖನು ಹಸನ್ಮುಖಿಯಾಗಿ ಹಿಂದೆಯೇ ನಿಂತಿದ್ದಾನೆ. ಬಾಳ್ವೆಗಿನ್ನೇನು ಬೇಕು ಇಷ್ಟು ಸಾಕಲ್ಲವೇ ಹರ್ಷಿಸಿದಳು ಸಖಿ, ಶಾಂತಿಯಿಂದ.”

## ತಂಗಾಳಿ ಕೂಗಿದಾಗ...

ತಂಗಾಳಿ ಕೂಗಿದಾಗ
ತಂಪು ಮಂದೆ ತೂಗುತ್ತಿತ್ತು
ವಾಸಂತಿ ಲೋಕದಲ್ಲಿ
ಎನ್ನ ಹೆಜ್ಜೆ ಸಾಗುತ್ತಿತ್ತು
ತಿರು ತಿರುಗಿ ನೋಡುತ್ತಿತ್ತ
ಸುತ್ತಾ...
ಕಾಮನ ಚಿತ್ತ ಚಿತ್ತ ಚಿತ್ತಾ...
ಒಂದರಾಸೆ ಒಂದಕೆ ತಿಳಿದು
ಬಂಧನದ ಬೇಡಿ ಕಳೆದು
ಮಂದರದಿ ಮಾಗಿ ಮಾಗಿ
ನೆನಪುಗಳ ಹಸಿ ಹಸಿ ಮಸೆದು
ಕ್ಷಣಮಾಯೆಯ ಸುಖದಲಿ ಕೂಡಿ
ಲೆಕ್ಕಾ ಹಾಕುತ್ತಿತ್ತಾ...
ಈ ಹತ್ತರಾಣಿಯ ಚಿತ್ತ.

ಕಾಮವು ಇಷ್ಟವನ್ನು, ಲೈಂಗಿಕ ಆಸಕ್ತಿಯನ್ನು ಧ್ವನಿಸುತ್ತಲೇ, ತನ್ನವರನ್ನಾಗಿಸಿಕೊಂಡು ಪ್ರೀತಿಸುವ ಅದಮ್ಯ ಚೈತನ್ಯವನ್ನು ನಿರೂಪಿಸುತ್ತದೆ. ವಸಂತವು ಈ ಕಾಮದ ಸೃಷ್ಟಿಯ ಆಹ್ವಾನದ ಕಾಲ. ಈ ಭೂಮಿಯ ಜೀವಿಗಳು ಪರಸ್ಪರ ಆಕರ್ಷಿತರನ್ನಾಗಿಸುವ ಸಂವೇದನೆಗಳ ಸುಪ್ತಪ್ರಕಾಶ. ಈ ಕಾಲದಲ್ಲಿ ಯೌವನದ ಪ್ರತಿ ಜೀವಿಯೂ ತನ್ನ ಮನೋರಾಗವನ್ನು ಹಾಡುತ್ತದೆ.

ಬಂಗಾರದ ಕಿರಣವು ಚೆಲ್ಲಿ
ಶೃಂಗಾರದ ಹನಿಗಳು ತೇಲಿ
ನಾಳೆ ಕೋಣೆಯ ಬಾಗಿಲ ತುಂಬಾ
ನೋವು ಸಾಕಿದ ಮುಳ್ಳುಗಳುದುಗಿ
ಬರಡು ಬಿರುಕಿನಲಿ ಕುರುಡಿನ ಕಾಲು
ತೇಲುತ್ತಿತ್ತಾ..
ಈ ನೋಯದಾ ಚಿತ್ತಾ.
ತಂಗಾಳಿ ಕೂಗಿದಾಗ
ತಲೆ ಬಾಗಿ ತಾವರೆ ಮುಡಿದು
ವಾಸಂತಿ ಅರಮನೆಯಲ್ಲಿ
ಮನಸ್ಸನ್ನು ಮೈಲಿಗೆ ಮಾರಿ
ತೈಲವಾಣಿಯ ತೇರನು ಹೇರಿ
ಕಾಯ ಬೇಕಿತ್ತಾ...
ಅದುವೆ ನಾಳೆಯಾ ಚಿತ್ತ.

**ವಸಂತ–ಳ–ವೇದನೆ**

ಕ್ಷಣ ಹಿತದ ಸುಖಕೆ ನವ ನಾದವನ್ನು
ಕೊರಳ ಕರುಳ ಹರಿದು ಮೆರೆವ
ನಿಮ್ಮ ಗುಣವೆ ಎನ್ನ ಕಣ್ಣೀರ ಋಣವು
ಇಬ್ಬನಿ ಮುಡಿದರೂ
ಹಸಿರು ತುಂಬಿ ನಡೆದರೂ
ಜೀವಂತ ಚಿರ ನಿದ್ರೆ ನಿನ್ನೊಳಪು
'ವಾಸಂತಿಯಲಿ ಇಂತಲ್ಲ
ಇಂತವರಿಗೆ ವಾಸಂತಿಯಲ್ಲ'
ಬಾ ಸುಖಿಸು ಎಲ್ಲಾ ಇದೆ
ಬಳಸಿ ಬದುಕ ಇದೇ ನಲ್ಮೆ
ನಾಳೆಗಳ ಹಾಳೆಯಲಿ ನೆನಪು
ಬರಹಗಳಿರಲಿ ಅಲ್ಲಿರುವೆ ನಾ
ಈ ಮಧುರ ವಸಂತವು.
ಬಾ ವಿಶ್ವವಿನುತೆ ವಸಂತಕೆ

ವಸಂತವನ್ನು ಹೇಳಲೊರಟ ನಲ್ಮೆಯರು ಬದುಕನ್ನು ವಿಶ್ವಮಾನ್ಯಗೊಳಿಸುವ ಹಾದಿಯಲ್ಲಿ ಅಲೋಚನೆಗಳನ್ನು ವಿಸ್ತಾರಗೊಳಿಸುತ್ತಿದ್ದಾರೆ. ಇಲ್ಲಿ ದೇಹದಾಹದ ಸಂಸ್ಕೃತಿಯನ್ನು ಕ್ರೂರವೆಂದು ತ್ಯಜಿಸದೆ ಅದೊಂದು ಕ್ಷಣಹಿತದ ಸುಖ, ಮನುಷ್ಯನ ಮನಸ್ಸಿಗೆ ಶಾಶ್ವತ ಸುಖಬೇಕು ಆಗ ಬದುಕನ್ನು ಅರ್ಥಪೂರ್ಣವಾಗಿ ಸವಿಯಬಹುದೆಂಬ ಸೌಂದರ್ಯವನ್ನು ಸಾಹಿತ್ಯದ ಮತಿದೇವಿಗೆಯಲ್ಲಿ ಸಾಣೆ ಇಡಿಯುವ ಕೆಲಸವಿದಾಗಿದೆ.

**ಕ್ಷೀರ ಕಾಂತಿ**

ಕೆನೆಯ ತನಿ ಮದ್ದು

ಕಾವ್ಯ ಸಿರಿ ಹಾಸಿ

ಮಣಿಲೇಖ ಮಾಲೆದನಿ

ಅರಳು ಮೌನವ ಚೆಲ್ಲಿ

ತಂಗಾಳಿ ತಿಳಿತಂತು ಎನ್ನ ಹೃದಯ

ಇನಿಯ ದನಿ ಸದ್ದು

ಎದೆಯಲುದಿಸಿ ರಂಗೋಲಿ

ನೃತ್ಯದಲಿ ಇರುವ ಧ್ಯಾನವ ಮೆಲ್ಲಿ

ಮುಂಗೋಳಿ ಮುಂಜಾವಿ ನಿನ್ನ ವಿಧೇಯ

ವಿನಯ ಹನಿವಿದ್ದು

ಭಾವ ಬೀಸಿ ಶಶಿರೇಖೆಯಲಿ

ಬರಲು ತಾಣವ ಲಲ್ಲೆಯಲ್ಲಿ

ಮನತಾಳಿ ವಸಂತದಿ ಮುನ್ನ ಪ್ರೇಮ ಧ್ಯೇಯ !

ಪ್ರೇಮ ಹುಟ್ಟುವ ಸ್ವಯಂ ಪ್ರಭೆಯು ಹೀಗೆ ಇರುತ್ತದೆ. ಇದರ ಸ್ವಾದವು ದಟ್ಟನೆಯ ಮಳೆಯಂತೆ, ಶುರುವಾಗುವ ಪರಿಗಾಗಿ ಕಾಯುತ್ತದೆ. ಅನಿಸಿಕೆಯು ಹನಿಯಲು ಪ್ರಾರಂಭಿಸಿದರೆ, ವ್ಯಕ್ತಿ, ಕಾಲ, ಯಾವುದೇ ಭೇದಗಳ ಕಳಚಿ ಧುಮ್ಮಿಕ್ಕುತ್ತದೆ. ಮನೋಹಿಡಿತದ ಪ್ರತಿಯೊಬ್ಬರೂ ಎಚ್ಚರದಲ್ಲಿ ಮನಸ್ಸನ್ನು ಹರಿಯಬಿಡುತ್ತಾರೆ, ಕೆಲವರು ಹುಚ್ಚರಾಗುತ್ತಾರೆ.

## ತೀರದ ತೇರಿನಲಿ

ತೀರದ ತೇರಿನಲಿ ಸಾಗರದ ಯಾತ್ರೆ
ಮೀಯಲು ಎದುರಾಗಿ ನಮ್ಮಿಬ್ಬರ ಜಾತ್ರೆ
ಕನಸೇರಿ ಬಂತೊಂದು ಕುಂಚನವಿಲುಚ್ಚು
ಬೆಚ್ಚನೆಯ ಪಿಸುಮಾತು ಹಾಗಿನ್ನು ಹೊಸತು
ತಿಳಿಯದ ಬಿಳಿಹಾಳೆ ತಿಳಿತನದ ಅಳಲು
ನುಡಿಯಿಲ್ಲ ನಡೆಮನವು ಕಡಲ ಮಡಿಲು
ಎಳೆಬಿಸಿಲು ತಂಗಾಳಿ ಯಾವರಾಗವಿಲ್ಲ
ಪ್ರಾಯ ತುಂಬಿದ ಪುಳಕ ನಾಳೆಚುದು ಬೇಕಿಲ್ಲ
ಇಂದಿನಾಸೆಗಳ ಸುಖಿಸಿ ಏತಕೆ ನಾಳೆಗಳು
ಚಂಚಲತೆ ಈ ಅಕ್ಷಿ ಭಣತಿ ಆಸೆ ಬರೆದ ಹಾಳೆಗಳು
ಮನಸಾಕ್ಷಿ ಮೃದುಮನಕೆ ನಿನ್ನಂತೆ ನಾ ತಿಳಿದು
ತಾರಾ ಧೀರೆಯ ಹಾಗೆ ಈ ಬಾಂಧವ್ಯ ಬೆಸುಗೆ
ನಾ ನಿನಗೆ ನೀ ನನಗೆ ಬಾ ವಸಂತಕೆ...

ಪ್ರೇಮಿಗಳನ್ನು ನಿತ್ಯ ವಸಂತದಲ್ಲಿಯೇ ಕಾಣುತ್ತೇವೆ. ತಮ್ಮದೇ ಲೋಕದಲ್ಲಿ ವಿಹರಿಸುತ್ತಾರೆ. ಅವರಿಗೆ ಕೋಪ, ದ್ವೇಷ ಯಾವುದೂ ಅಗತ್ಯವಿಲ್ಲ. ಸುಮ್ಮನೆ ಕಣ್ಣವಿ, ಕಿವಿದನಿಯಲ್ಲಿ ತಲ್ಲೀನರಾಗುತ್ತಾರೆ. ಜಾತ್ರೆಯ ತೇರಿನ ಯಾತ್ರೆಯಂತೆ ಮನಸ್ಸು ವಿಜೃಂಭಿಸುತ್ತಿರುತ್ತದೆ. ಆದರೆ ಜಾತ್ರೆಯ ಪಕ್ವತೆ ಇರುವುದಿಲ್ಲ. ಸಾಗರದ ವೇಗ ಪ್ರಯಾಣದಂತೆ ನಿರ್ಮಲ–ನಿಶ್ಚಲ ಅನಂತ ಬಯಕೆಯಗಳಲ್ಲಿ ಧುಮ್ಮಿಕ್ಕುತ್ತದೆ. ಸಾಗರದಷ್ಟು ಅನುಭವಬೇಕಷ್ಟೆ.

## ಎನ್ನರಸಿ

ವಸಂತದ ಎನ್ನರಸಿ ಚೈತ್ರವರ್ಣೆ
ಹಾಡಲೇನು ನಿನ್ನರಸಿ ಎನ್ನೂರ ಕರುಣೆ
ನಿರೆಯ ನಾರಿ ಶೃಂಗಾರ ತೋರಿ
ವಿಶ್ವ ಕರೆಯ ಸಿಂಧೂರ ಸಾರಿ
ಹರಿಯ  ಮರೆಯ ನಗುಜಾರಿ
ಬಂದಳು ಮನಕೆ ಶ್ರಾವಣ ವಾಸಂತಿ
ತೋಟದ ಆಟಕೆ ಬರಲಿಲ್ಲ ನೀ ಬಲು ಜಾಣೆ
ಊರ ಕೇರಿಯ ದಿಬ್ಬದಿ ನುಡಿಯಲಿಲ್ಲ ನೀ ವೀಣೆ
ಓ ತುಂಬಿದ ಕೊಡವೆ ಸಂಸ್ಕೃತಿಯ ಸಿರಿದೇವಿ
ಪಲ್ಲಕ್ಕಿಯೇರು ಬಾ ಎನ್ನ ವಸಂತ ಮನದುಂಬಿ.

ನೋವನ್ನು ಹಿಂಗಿಸುವ ವಸಂತವು ಪ್ರಕೃತಿಯನ್ನು ಹದಗೊಳಿಸುವ, ಸೃಷ್ಟಿಸುವ ಅದ್ವೀತಿಯ ಶಕ್ತಿ. ಈ ಶಕ್ತಿಯನ್ನು ಮನುಷ್ಯನು ಏಕಾಂತವಾಗಿ ಪಡೆಯುವುದು ಕಷ್ಟಕರ ಸಂವೇದನೆ. ಗಂಡು ಹೆಣ್ಣೆಂಬ ಕಾಮಶಕ್ತಿಗಳ ಮಿಲನದಲ್ಲಿ ಸಹಜವಾಗಿಯೇ ಸೂಕ್ಷ್ಮಗೊಳಿಸಬಹುದು. ಏಕಾಂತವಾಗಿ ಸಂರಚನೆಗೊಳಿಸುವ ತಾತ್ವಿಕತೆಯೇ ಧ್ಯಾನ.

## ಇವಳು

ಧ್ವನಿಸುವುದಿಲ್ಲ ಅನಿಸುವುದು
ಹೆಣ್ಣು ಹೇಳದ ಕಣ್ಣಿನಾಳದ
ಕಂಪಿಸುವ ಅನುಕಂಪನ
ಉರಿಯುವಳು ಕರ್ಪೂರದಂತೆ
ಹಚ್ಚಿದಾಗ ಸ್ವಚ್ಛವಾಗಿ
ಅವಳದೆಲ್ಲಾ ಬೆಚ್ಚನೆಯ ಭಾವ
ಅಪ್ಪನ ಧೀರದೆತ್ತರಕೆ
ಅಮ್ಮನ ಮೇರು ಉತ್ತರಕೆ
ತಲೆಬಾಗುವ ತಾಳಿ ಇವಳು
ಭಾವತೀರದ ಸಾಲು ದೋಣಿಯ
ಹಿಂಬಾಲುತನವ ಹಿಂದೆಸೆದು
ಬದುಕು ಸೂರಿನ ಅಡಿಚಿತ್ತತೆಗೆ
ಎಲ್ಲವ ಮುಡಿಕಟ್ಟುತಿಹಳು
ಏಕಾಂತದ ಬಿಸಿಲಿಗೆ ಮುಡಿಬಿಚ್ಚಿ
ಮತ್ತೆ ಹೂ ಗುಚ್ಚವಾಗುವ
ಮೌನ ದೀಪದಿ ಮನ ಬೆಳಗುವ
ವಿಶ್ವ ವಸಂತತೆ! ವಿಶ್ವಾಸಗೀತೆ!
ಮನ ಅರಸುವ ಮೌನಿ ಇವಳು
ವಸಂತ ವಾತ್ಸಲ್ಯದ ಎನ್ನವಳು!

ಹೆಣ್ಣಿನ ಅರ್ಥಗಳನ್ನು ಹುಡುಕಾಡುತ್ತಾ ಸೋಲುವಾಗ, ಒಲವಿನಲ್ಲಿ ಅವಳನ್ನು ಬಂಧಿಸುವ ನಲ್ಮೆತನವು ಹೆಣ್ಣು–ಗಂಡುಇಬ್ಬರಿಗೂ ಬೇಕಿದೆ. ಇರುವಂತಿಕೆಯನ್ನು ಮೀರುವ ಮಹತ್ವದ ಪಲ್ಲಟಗಳು ನಮ್ಮಲ್ಲಿ ವಸಂತವೆಂಬ ವರ್ತಮಾನಗಳನ್ನು ಸೃಷ್ಟಿಸಬೇಕಿದೆ.

ಶ್ರೇಷ್ಠವಾದುದನ್ನು ಶಾಶ್ವತ ಕನಸಿನಲ್ಲಿ ಕೂಡಿಡುವ ತಿಜೋರಿಯೇ ನಮ್ಮ ಮನಸ್ಸು. ಯಾವ ಮನಸ್ಸು ವಿರಹಗೊಳ್ಳುತ್ತದೆಯೋ ಅಲ್ಲಿ ನೆನಪುಗಳು ಜೀವಂತವಾಗಿರುತ್ತದೆ. ದುಃಖಗೊಂಡಷ್ಟೂ ಮರೆವು, ಹೊಸ ನೆನಪುಗಳಿಗೆ ಮುಕ್ತ ಆಹ್ವಾನ.

## ಪ್ರೇಮ ತಿಜೋರಿ

ಕಾಯದಿರು ಕಾಲದಲಿ ಎನ್ನ
ನಾ ಇರುತ ನಿನ್ನರುಹಿ
ಜಾಲದ ಜೋಲಿಯಲಿ ಬಿನ್ನ
ನೀ ನೀಡುವ ಸಂತಸವು
ತಿಳಿವು ಕಲಿವಿನ ಕಾಯೆ
ನಾವೆಂಬುದೇ ನಮ್ಮ ಇರುಹು!
ಮನಮೀಟಿ ಮೃದು ದಾಟಿ
ಹಸಿಗೊಳಿಸು ನೀ ಇರುತ
ಒಲವು ತೇರಿ ಎಲ್ಲ ಮನವ
ನುಣ್ಣಿಸು ನಲ್ಲನೆಲ್ಲ ದಿನವ
ತನು ತೀರ ಹರಿಯೆ ಅಯನದಿ
ತಾಳ್ಮೆ ತಳಿರ ಎಳೆಯ ಇಳೆಗೆ ಕೈರವ
ಸಾಗು ಸ್ವತಂತ್ರ ಸಮರಸ
ನೀ ಎತ್ತರೆತ್ತರ ಸಾತದಂತ ಉತ್ತರ
ಮನಕೆ ಸುತ್ತು ಮನವೆ ಹತ್ತಿರ
ನಲ್ಮೆ ನಲಿವ ಯಶೋತಾಣ
ಅಕ್ಷರಾಂಶಿ ಅರಳು ದೀಶೋ ಬಾಣ
ನೆರಳಿನಾಳದಿ ಹತ್ತಿರ ಅದರತ್ತಿರ
ಕ್ಷಣದ ಹಸಿಯ ಬಿಸಿಯ ಛಲದಿ
ಬಾ, ವಸಂತಕೆ ಇದು ಲೋಕ ಸಂಸಾರ.

## ಸಂ–ಸಾರ

ನಾಳೆಯೆಲ್ಲವ ಸಹಿಸು ತಾಗಿ
ತೆರೆದ ಹಾಳೆಯಲಿಂದು ಮೂಡಿ
ಹೆಜ್ಜೆಯುದ್ದಕೂ ನೆನಪು ಸಾಗಿ
ನುಡಿಮೂಡುವ ಭರವಸೆಯು
ನಾನು ನೀನು
ಸೃಜನ ವೇದಿಕೆ ಪ್ರೇಮ ವೆನಿಸಿ
ಅಯನ ಕಾಲಕೆ ಸಂಸಾರವೆನಿಸಿ
ಮಾಯಾತಂತಿಯ ನೊಲಿಸಿ ಕುಣಿಸಿ
ಋಣದ ಕಣದ ಛಲವ ಬೆರಸಿ
ತಪೋ ವಿಧಿಯ ಜಾಡುಕೂಡುವ
ನಾನು ನೀನು
ಬಾಳು ಕೂಡುವ ಹುಟ್ಟು ಸಾವಿಗೆ
ಬಾಂಧವ್ಯ ತರುವ ನಲ್ಮೆ ದಿವಸಕೆ
ನಲ್ಲ–ನಲ್ಲೆಯು ಕೂಡಿ ಕಟ್ಟುವ
ಪಿತೃಮಾತಾ ಮಮತೆ ಘನತೆ
ಫಲಿಸಿ ಧ್ವನಿಸಿ ರೂಪುತಾಳುವ
ವಿಶ್ವ ನಾಳೆಯ ನಾನೀ ಗೆಲ್ಲುವ
ನಾನು ನೀನು.

ನಾನು – ನೀನು ಎಂಬ ಎರಡು ಭಾವಗಳು ನಮ್ಮೊಳಗೆ ಅಡಗಿವೆ. ಅವುಗಳನ್ನು ಸ್ವಚ್ಛಗೊಳಿಸಿದಷ್ಟೂ ನಾವಾಗುವ ಒಲವು ಮೂಡುತ್ತದೆ.

## ಬೆಳಕಿನ ಬಟ್ಟಲು

ನನ್ನನೇ ತುಂಬು ಲೋಕದ ಗುಣಿಗೆ
ಚೆಲ್ಲುತ ಕೂಡುವ ನಿನ್ನೀ ಮನಕೆ
ಮಂಜಿನ ನೆರಳು ಕರಗದೆ ಕೂತಿವೆ
ಇಬ್ಬನಿ ನೆರಳಲಿ ಹಾಯುತ ತರುವೆ
ನಿನ್ನೀ ರೂಪದ ಕೆನ್ನೆಯ ಸನ್ನೆಗೆ
ತಳೋದರಿ ತಾಳು ಪತಿ ರೂಪವು ನಾ
ಪೂಜಿಸು ಮನದಲಿ ಜಾಯೆ ನೆರಳು ನೀ
ಕನಿಹನಿ ಕಾಣಿಲೋಕ ಸಂಚಾರದ ಕಾಂತಿಯಲಿ
ಬರುವೆ ಇರುವೆ ತರುವೆ ಕರುವೆ
ಹೀಗೆ ಇರುವುದು ಮುಪ್ಪಿನ ಕನಸಲು
ಅಪ್ಪುವ ಒಪ್ಪುವ ತೂಕದ ಕನವರಿಕೆ.
ಬಾ ಬೃಂಗಾಧಾರದಿ ವಸಂತ ಮನಕೆ...

ಕವಿತೆಯು ಸಂಘರ್ಷದ ಸಂರಚನೆ. ಸಮಸ್ಯೆಗಳ ಅಕ್ಷಿ. ಸಾಂತ್ವನಕ್ಕಾಗಿ ಕೈಚಾಚಿದ ತಾಯಿ. ಹೊಸದೃಷ್ಟಿಯಲಿ ಸೃಷ್ಟಿಯನೇ ಸಂಜಾತವಾಗಿಸುವ ಬೆಳಕು. ತುಡಿತಗಳ ತವರು. ಮಿಡಿತಗಳ ಬೇರು. ಪದಶಕ್ತಿಯ ಬೆವರು. ಜ್ಞಾನ ವಿಜ್ಞಾನದ ಸೂರು. ಕವಿತೆ ಕಲ್ಪಿತವಾದರೂ ಕಾಲಾತೀತ ಸತ್ಯ.

## ಬದುಕಿನ ಹಾಡು

ನಾನು ನೀನು
ಬೀದಿಯ ಕಣ್ಣು
ಕಾಣ್ವ ಲೋಕವೆ ಕತ್ತಲೆ!
ಹುಡುಕು ವಿಧಿಯ
ಮಾನವ ಮಾರಿ
ಮಾಯ್ವ ತೂಗುವ ಬೆತ್ತಲೆ!
ನಾಳೆಯ ಮುಗಿಲು
ಕಾಣುವ ಹಗಲು
ನೋಯ್ವ ಆತ್ಮದಿ ಸುತ್ತಲೆ
ಸುಖದ ಮುಖದ
ನೂರಾರು ಬಾಗಿಲು
ಹಾಯ್ವ ನಿನ್ನನು ಮುತ್ತಲೆ!
ಜೀವದಿ ಬೇಡ
ಕೊಲ್ಲುವ ಆಸೆಯು
ಸಾಯ್ವ ನನ್ನನೇ ಬಿತ್ತಲೆ
ನಾನು ನೀನು
ಬೀದಿಯ ಕಣ್ಣು
ಕಾಣ್ವ ಲೋಕವೆ ಕತ್ತಲೆ!

ತೆರೆದ ಕನ್ನಡಿಯಂತಿರುವ ಜಗತ್ತಿನಲ್ಲಿ ನಮ್ಮ ಪ್ರೇಮವೂ ಮುಕ್ತವಾಗಿದೆ. ಆದರೆ ಕಾಣುವ ಕಣ್ಣಿನ ಶುದ್ಧತೆಯನ್ನು ನಾವು ಗ್ರಹಿಸಲಾಗದು. ಅದು ಕತ್ತಲಾದರೂ, ನಮ್ಮ ಬೆಳಕಿನ ಕಿರಣ ನಮಗೆ ಹಿತವಿರಬೇಕು.

## ತಾಯಿ ನೀ

ವೈದ್ಯ ದೇವೋಭವ
ತಾಯಿ ವೈದ್ಯ ದೇವೋಭವ
ಹೃದಯ ಕರುನಾಳು ಸಂಜೀವಿನಿ
ಅಮೃತತ್ವೆ ನುಡಿ ಗುಣಪೂರ್ಣೆ
ಮನರೂಪಿ ಆದಿಯಾಂತ್ಯೆ ರೂಪು ಶಾಲಿನಿ
ಷಟ್ಗುಣೈಕ್ಯ ಭವಿಷ್ಯ ಭವಃ
ವಿಶ್ವಾತೀತಾರ್ಯೆ ಸರ್ವತ್ ಮಾತೃಹಿಃ

ಹೆಣ್ಣು ತಾಯಿಯಾಗುವ ದಾಂಪತ್ಯಗೀತೆಯೇ ಈ ವಸಂತದ ಫಲಿತ. ಕಾಮವನ್ನು ವಿರಾಮಗೊಳಿಸುವ ಸ್ವರೂಪದ ಕಾಣ್ಕೆಯಾಗಿ 'ತಾಯಿ' ಸೃಷ್ಟಿಯಾಗುತ್ತಾಳೆ. ಸೃಷ್ಟಿಯಾಗುವ ತಾಯಿಯ ದೃಷ್ಟಿಯು ಸಾಕುವಿಕೆಯ ವಿಸ್ತಾರದಲ್ಲಿ ಪಾಲನೆಯ ಶಕ್ತಿಯಾಗುತ್ತಾಳೆ. ತ್ಯಾಗ ಅವಳ ಮೊದಲಹೆಜ್ಜೆ, ಯೋಗವು ಬದುಕಿನ ಧ್ಯೇಯ.

## ನೋಟದ ನೆರಳು

ವಸಂತ ಒಲುಮೆಯ ಹಾರುತ ಸೇರು
ನಿನ್ನೀ ಚೆಲುವಿನ ಬಣ್ಣದ ಗೂಡು
ಮೇಘದ ಸಾರವ ತುಂಬುತ ಬೀರು
ಹನಿಗಳ ಅಕ್ಷರ ಬರೆಯಿತು ಹೂ ತೇರು
ನೆನ್ನೆಯ ಕವಿಯು ನಾಳೆಯ ಸವಿಯು
ನಿನ್ನೆದೆ ಸೇರಲು ಬೇರೇನು!
ಕಾಲದ ಕಲಿವು ಮಾಯಾ ನಲಿವು
ಸಾಗುವ ಪಯಣದಿ ನಾ ಇರಲೇನು!
ಬಾ ವಸಂತ ನೀನೇ ಮಾಗಿಯ ಕಾಲ
ಮೆಲ್ಲನೆ ಬಾ ವಸುಧೆ ನೀನೆ
ಎಲ್ಲೆಡೆ ನಾ ಚಿರ ಜೀವ
ವಸಂತ ಒಲುಮೆಯ ನಮ್ಮೀ ಭಾವ.

ಒಲವು ಮಕ್ಕಳ ಪದ್ಯದಂತೆ. ಅರ್ಥಮಾತ್ರ ಅನುಭಾವದ ಅನುಸಂಧಾನ. ನಾವು ಕಾಣುವ, ಗ್ರಹಿಸುವ, ಆತ್ಮಾನುಸಂಧಾನಮಾಡಿಕೊಳ್ಳುವ ಗಂಭೀರತೆಯು ನಮಗೆ ಅದೆಷ್ಟೋ ಬೆಳಕನ್ನೂ ಮುಕ್ತವಾಗಿಸುತ್ತದೆ.

## ಹಿಂದೆ–ಮುಂದೆ

ಸದ್ದಿಲ್ಲದೆ ಸಾಗು ಬಾ
ಎನ್ನ ಬೆನ್ನ ಹಿಂದೆ
ನಾ ನಿನ್ನ ಹಿಂದೆ
ಯಶೋಸೃಷ್ಟಿಯ ಮಧುರ ಮುಂದೆ.
ಹಂಚು ಬಾ ನವಿರಾಗಿ ಅಧರ ತೇದು
ವಿಶ್ವಕೆ ವಿಶ್ವಾಸಕೆ ಮೆಲ್ಲುವ
ಪಂಚಧಾರೆ ಫಲಸಾರ ಮೊಗಕೆ
ಬಾ ಭಾವನೆಯೆ ವಾಸಂತಿಯಲ್ಲಿ
ಮೇಘಧರೆಯ ಮೌನ ಕುಂಚಿಕೆ
ನೀ ಎನ್ನ ಅರ್ಪಿಸಲು ಜಗಕೆ
ಬಾ ವಸಂತಕೆ ಸದ್ದಿಲ್ಲದೇ...

ಸಮಹಿತ ಪಯಣಕ್ಕೆ ಒಲವೇ ದಾರಿ. ಮನಸ್ಸು ಅಲ್ಲಿ ಪ್ರೇಮ ತಿಜೋರಿ. ನಾವು ಕಣ್ತೆರೆದಷ್ಟೂ ನಮ್ಮ ಬದುಕು ವಿನೂತನ ಹಾಗು ವಿಸ್ತಾರ.

## ಯಶೋಸಖಿ

ಸಖಿ ಎನಲು ಸುಖವೇನು
ಕೂಡುವ ಬೆರಳ ಕೊರಳು
ಸಖ ನೀ ಸಾಲು ದುಃಖವೇನು!
ತುಂಬುವ ಕಣ್ಣೀರ ನೆರಳು
ಸಾವಿರ ದಾರಿಯ ಯಶೋಗುರಿಗೆ
ಹಸ್ತಕೆ ಹಸ್ತ ಕೈಕೊಟ ಸಲುಗೆ
ನಾ–ನೀ ಆತ್ಮದೀ ಸ್ಫೂರ್ತಿ ನಿನಗೆ
ಜೊತೆಯಾಗು ಛಲದಿ ನೀ ಗೆಲುವು ಎನಗೆ
ಮುಧವೇನು ಸ್ವಾಧದಲಿ ಧೀನನಾಗಿ
ಸುಧೆ ನೀನು ನಾದದಲಿ ಧ್ಯಾನನಾಗಿ
ಬಾ ಸೇರು ಸಖಿ ಸುಖಿಯು ಮೌನವಾಗಿ
ನಾ ಇರುತ ಸುಖ ದುಃಖದಿ ನೀ ವಸಂತವಾಗಿ!

ಪರಸ್ಪರ ಗೀತಾನುರಾಗದಲ್ಲಿ ಹೇಳಿಕೆ–ಕೇಳಿಕೆಗಳಿಲ್ಲ. ಭಕ್ತಿ ತೃಪ್ತಿಯ ಕಾರ್ಯ. ಅದಕ್ಕೂ ಕಾಲವಿಲ್ಲ. ಸಖನು ಸೃಷ್ಟಿಸಿಕೊಳ್ಳುವ ಸಖಿಭಾವವು, ತನ್ನೊಳಗೆ ಸೋತು ಗೆಲ್ಲುವ ವ್ಯವಸ್ಥಿತ ಸೋಪಾನ.

## ದೀಪಗನ್ನಡಿ

ಅಂಗೈ ಅರಗಿಣಿಯವಳು
ಬಂಗಾರ ಗುಣದವಳು
ಸಿಂಗಾರವೇಕೆ ಓ ಹೃದಯ ಶ್ರೀಮಂತೆ
'ಇಷ್ಟಾನು ಇಷ್ಟವ ತೊಟ್ಟು
ಕಷ್ಟವನೆಲ್ಲವ ಬಿಟ್ಟು
ಬದುಕೋಣ ಬಿಗಿಯಾಗಿ
ಈ ಇಷ್ಟಗಲದ ಮುಷ್ಟಿಯೊಳಗೆ'
ಕನವರಿಸು ಕನಸುಗಳ
ನಾ ಒಬ್ಬನಿರುವಾಗ ನಿನ್ನ ಒಳಗೆ
ನಾ ನೆನಪಾಗುವೆ ಎಲ್ಲಗಳಿಗೆ
ಪ್ರಶ್ನೆಮಾಡುವ ಮುನ್ನ
ಉತ್ತರಿಸು ನೀ ಜಾಣೆ
ಮಸ್ತಿಷ್ಕದೊಳಗೆ ಮನೆಯ ಮಾಡಿ
ನಾ ನಿನಗೆ ನೀ ನನಗೆ ದೀಪಗನ್ನಡಿಯಾಗಿ!

ನಮ್ಮೊಳಗೆ ನಾವು ತೆರದುಕೊಂಡಷ್ಟೂ ನಾವು ಮುಕ್ತವಾಗಿ ಕಾಣುತ್ತೇವೆ. ಅಲ್ಲಿ ಮೂಡುವ ಬೆಳಕು, ಹಲವು ಹೃದಯಗಳ ಶುದ್ಧಿಗೆ ಕಾರಣವಾಗಿ ಆದರ್ಶವಾಗುತ್ತದೆ. ಹಿಂಸೆ ನಾಶದ ಬೀಜವಾದಂತೆ, ಒಲವು ಸೃಷ್ಟಿಯ ಪ್ರಕೃತಿ.

## ಪ್ರೇಮಗೀತೆಯಾಗು

ಶಿಶು ಗೀತೆಗೂ ಮುನ್ನ
ಪ್ರೇಮಗೀತೆಯಾಗು
ಮತ್ತೆ ಬರದು
ಮಣೆಯೇರಿದ ಹಸೆಯ ವಸಂತ
ಈ ಪ್ರೇಮದ ಬಾಗಿನ
ಅಗಲಿಕೆವರೆಗೂ
ಸಾಗಲಿ ಹೃದಯದಿ ತೀರಮಯ
ಸಿಗುವೆನು ಸಾವಿಗೂ
ಬಾಗಿನ ನೀಡಲು
ನೀ ನೀಡುವ ಮಮತೆಯು
ಸನಿಹ ಮಯ
ಇಂದೇ ಮೂಡಲಿ ಕವಿತೆಗಳು
ನಾಳೆಗೂ ಉಳಿಯಲಿ ಮಮತೆಗಳು
ಬಾರದ ಮುನಿಸನು ತೋರದಿರು
ನಿನ್ನೀ ಗೀತೆಗೆ ನಾ ಶಿಶುವಾಗಿಹೆ
ಪ್ರೇಮದ ಸಾರವ ನೀ ತರಲು
ಬಾ.. ಶಿಶು ಗೀತೆಗೆ ಮುನ್ನ,
ಪ್ರೇಮ ಗೀತೆಯಾಗು.

ಪ್ರೇಮವೆಂಬುದೇ, ಜೀವನದ ಅಂತರಾತ್ಮ. ಅಲ್ಲಿ ಶಿಶುಗೀತೆಯು ಪ್ರೇಮಗೀತೆಯಿಂದ ಸೃಷ್ಟಿಯಾಗಬೇಕು. ಅದೆಷ್ಟೋ ದಂಪತಿಗಳು ಬದುಕಿನ ಆನಂದವನ್ನು ಸವಿಯಲು ಮನಸ್ಸನ್ನು ಶಿಶುವಿನ ಮುಗ್ಧತೆಯಲ್ಲೇ ಕಾಯ್ದಿರಿಸಿಕೊಳ್ಳುತ್ತಾರೆ. ನಾವು ಲೋಕವ್ಯವಹಾರದಲ್ಲಿ ತಲ್ಲೀನರಾಗುವವರು. ಆದರೆ ಮನಸ್ಸಿನ ಮಧುರತೆಯನ್ನು ಮರೆಯಬಾರದು ಎಂಬುದು ವಸಂತಸಾರವಾಗಿದೆ.

# ಬಾ ಹತ್ತಿರ

ಭೂ ತಾಯ ಉಸಿರು ಬರೆದಾಯ್ತು
ತಂಪು ತಂಪಿನಾ ತೀರ
ಕನಸು ಬಸಿದು ಕಂಪಾಯ್ತು
ಕ್ಷಣಕೆ ಆತ್ಮವೀ ಸೋದರ
ಹೆಣ್ಣು ಗಂಡಿನ ಹಸಿವು ಭಾವ ಜೀವ ದಿನವು
ಮೂಡಿ ಕೂಡಿ ಸದೂರ
ಚಿತ್ತ ವೃತ್ತಿಯ ಅನಿಸು ಅನಿಕೆಗೆ
ಪ್ರೀತಿ ಒಲವು ಮಧುರ.
ಇಷ್ಟ–ಕಷ್ಟವು ಪುಷ್ಟಿಯಾಗಿದೆ
ಅರ್ಥಚರಿತಾಂಕುರ
ಹಾಡಲೇನು ಜೊತೆಕೂಡಿ ಇನ್ನೂ
ಇದುವೆ ಪ್ರೇಮ ಸಾರ
ಸುಖದ ಹರುಷದ ಬದುಕ ಬಂಡಿಗೆ
ಬಾ ಹತ್ತಿರ ಬಾ ಹತ್ತಿರ ಬಾ ಹತ್ತಿರ
ಇದುವೆ ನಲ್ಲ–ನಲ್ಲೆಯ ವಸಂತ ಪ್ರೇಮ ಸಾರ

ಹತ್ತಿರವಾಗುವುದು ಪಾಶ್ಚಾತ್ಯ ಚಿಂತನೆ. ಹತ್ತಿರವಿರುವುದು ಭಾರತೀಯ ಕಲ್ಪನೆ. ನಮ್ಮಲ್ಲಿ ಆಗುವಿಕೆಗಿಂತ ಮಾಗುವಿಕೆಗೆ ಹೆಚ್ಚು ಅರ್ಥಗಳಿವೆ. ಇರುವುದನ್ನು ಉಳಿಸಿಕೊಳ್ಳುವುದರಲ್ಲಿಯೇ ನಮ್ಮ ಚರಿತ್ರೆಗಳು ಅಳಿದಿವೆ. ದೇಶ–ಕಾಲಗಳನ್ನು ಮೀರಿ ನಾವು ಇಂದು ಒಲವಿನ ಅರ್ಥ ಮತ್ತು ಬದುಕಿನ ನೇಪಥ್ಯಕ್ಕೆ ಸೇರಿದ್ದೇವೆ. ಇಲ್ಲಿ ಪ್ರೇಮವೊಂದೇ ಅನಂತ.

## ಮೆಲುಕು

ಅಪ್ಪ–ಅಮ್ಮ ಕೂತು
ಮೆಲುಕು ಜೀವನ ಮಾತು
ಅಲ್ಲಿ ನೋಡು ದರ್ಪಣ
ಅಂದು ನೀ–ನಾ ಅರ್ಪಣ

ನೋಡಿ ಇಲ್ಲಿ ನೀವು
ನೀವು ಎಲೆ, ನಾ ಅಡಿಕೆ
ಸುಣ್ಣವಾಗಿ ಮಕ್ಕಳು
ಈ ಕೆಂಪು–ತಂಪು ಜೀವನ.
ಅದುವೆ ನಮ್ಮೆ ಜೀವನ
ಸ್ವರ್ಣ ಸ್ವರ್ಗ ಸಮಾನ.
ನೆತ್ತಿ ನೋಡು ಸುತ್ತಿ ಬಂತು
ಶ್ವೇತ ಕೇಶ ಸಾಗರ ನೀಜಾ ರೀ!
ಅಂದು ಕೇಶ ನೋಟ
ಕಸ್ತೂರಿ ಕಲೆಯ ಆಗರ.
ರೀ ಅಲ್ಲಿ ನೋಡಿ !
ನಿಮ್ಮ ಎನ್ನ ಕೆನ್ನೆ
ಒಳಪು ಜಾರು ಬಂಡಿ.
ನಿಜಾ ಕಣೇ!
ಮಗಳ ಮದುವೆಯಂದು
ನೀನೇ ವಧುವಂತೆ ಕಂಡೆ

ನಾ ನಿನಗೆ ವರನೆಂದುಕೊಂಡೆ.

ಅಂತೂ

ಮುದ್ದು ಮಗಳು ಮುಗ್ಧಳಾಗಿ

ಅವಳದೊಂದು ಜೀವನ...

ನಿಜಾ ರೀ!
ಬೆಳೆದ ಮಗನು ಕಾಸಿಗಾಗಿ ದೇಶಬಿಟ್ಟನು.

ಸ್ವಾ ಅಧೀನಕೆ ದೀನನಾಗಿ ಮಮತೆ ಮರೆತನು

ನಿಜಾ ಕಣೇ!

ಪ್ರತಿ ದಿನ ಹನಿಯ ಹಾಗೆ

ಮತ್ತೆ ಮನೆಯ ಕೂಡದು

ನಿಜಾ ರೀ!

ಇಟ್ಟ ಹೆಜ್ಜೆ ಮತ್ತೆ ಇಟ್ಟರೂ,

ಗುರುತು ಬೇರೆ ಅಲ್ಲವೇ

ಸಾವು ಸನಿಹ ಬರುತಿದೆ

ಅಳುಕು ಹೆಜ್ಜೆ ಇಡುತಿದೆ

ಇರಲಿ ಹಗಲುಗನಸು ಬೇಗ ವೀಳ್ಯ ತಿನಿಸು

ನಿಜಾ ರೀ!

ಬದುಕು ಹಬ್ಬದೂಟ,

ನಮ್ಮದು ಬರೀ ಬೊಂಬೆಯಾಟ.

ವಿಶ್ವವೇ ಕಿರಿದಾಗಿರುವ ಹಿರಿದರ್ಥದಲ್ಲಿ ತಂದೆ–ತಾಯಿ ಮೊದಲಾದ ಸಂಬಂಧಗಳಿಗಿಂತ ಲೋಕಕರ್ತವ್ಯಕ್ಕೆ ಇಂದಿನ ಯುವ ಸಂಪತ್ತು ಸಿದ್ಧವಾಗಿ, ಓದಲು, ಉದ್ಯೋಗಕ್ಕಾಗಿ ಪ್ರದೇಶದಿಂದ ಪ್ರದೇಶಕ್ಕೆ ಸಂಚಾರವು ಮುಕ್ತವಾಗಿದೆ. ಅವರ ಬದುಕಿನೊಂದಿಗೆ ತಂದೆ–ತಾಯಿ ಸಂಬಂಧಗಳು ಹೊಂದಿಕೆಯಾಗುವ ಅನಿವಾರ್ಯತೆಯೂ ಇದೆ. ಸ್ಥಿತ್ಯಂತರಗೊಳ್ಳದ ಕುಟುಂಬಗಳು ನೋವನ್ನೂ, ಅಸುಖವನ್ನು ಚೆಲ್ಲಬೇಕಾಗುತ್ತಿದೆ. ಆದರೆ ಇರುವಂತಿಕೆಯನ್ನು ಪ್ರೀತಿಸುವ ತಂದೆ–ತಾಯಿಗಳು ಮೊದಲು ತಮ್ಮನ್ನು ತಾವು ಪ್ರೀತಿಸುತ್ತಾರೆ. ಹೊಂದಿಕೆಯೊಂದಿಗೆ ಸುಖವನ್ನು ಅರಸುತ್ತಾರೆ. ಭೂಮಿ, ಸಂಪತ್ತಗಳ ಆಸೆಯಿಂದ ನೆಲೆಯನ್ನೇ ಸ್ವರ್ಗವೆನ್ನುವ ಜನರು ಲೋಕಕ್ಕೆ ವಿಸ್ತಾರ ಕಾಣಿಕೆ ನೀಡಲು ಕಷ್ಟ. ಇಲ್ಲಿ ಹಿರಿ–ಕಿರಿಯ ಪ್ರೀತಿಯು ಹೊಂದಿಕೆಯಿಂದ ನಿಂತಿದೆ.

## ಆತ್ಮಾನುಸಂಧಾನ

ನಾನು ನೀನಾದಮೇಲೆ
ನೀನು ನಾನಾದ ಮೇಲೆ
ನಮಗೆ ಬೇಕಾಗಿದೆ ಆತ್ಮಾನುಸಂಧಾನ
ಕಾಣುವ–ಕೇಳುವ–ಆಲೋಚಿಸುವ
ಎಲ್ಲಾ ನೈಜತೆಯಲ್ಲೂ
ಅರ್ಥವಿರದಿರಬಹುದು
ನಮ್ಮೊಳಗೆ ನಾವಾಗುವ
ನಮ್ರ ಸಾರ... ಈ ವಿಚಾರ.
ಕಳೆದುಕೋ ಕಳಚುವ ಎಲ್ಲವನು
ಪಡೆದುಕೊಳ್ಳುವ ಮನವಿಗ್ಗು
ಒಮ್ಮೆಯಾದರೂ ಕೂತು
ಕಣ್ಣಿಗೆ ಕಣ್ಣನು ಹಚ್ಚಿ
ಎದೆಯ ಕಿಟಕಿಗಳ ತೆರದು
ಮನದ ಮಧುವಲ್ಲಿ
ಬೆಳಕನ್ನು ಚೆಲ್ಲೋಣ ಬಾ
ಇದು ನಮ್ಮ ಆತ್ಮಾನುಸಂಧಾನ.

ವಿಭಿನ್ನವಾಗಲು ನಮಗೆ ನೂರು ದಾರಿಗಳಿವೆ. ಏಕವಿವೇಕವು ನಮ್ಮ ಕನ್ನಡಿಯಲ್ಲವೇ. ಪ್ರೇಮವೆಂವರೆ ಅದೊಂದು ಮೌನ. ಎಲ್ಲಾ ಸ್ಥಿತಿಯಲ್ಲೂ ಸಮಸ್ಥಿತಿಯ ಪ್ರಾಜ್ಞರಾಗುವ ಸುಲಕ್ಷಣ. ಒಲವು ಇಂತಹ ಶ್ರೇಷ್ಠಕಾರ್ಯಕ್ಕೆ ಯಾವಾಗಲೂ ಬೆಳಕು ಚೆಲ್ಲುತ್ತದೆ.

## ಅಡುಗೆ–ಜಗಮುಡಿಗೆ

**ಮನಮನೆಯ ಹುಡುಗಿ**

ವಾಸಂತಿ ಕೇಳು ನಿನ್ನ ಮಹಿಮೆ
ಈ ನಿನ್ನ ಮಡಿಲ ಮಹಾ ಸೀಮೆ
ಮೆಲು ಮೆಲ್ಲನೆ ಪಿಸು ಮಾತಲಿ
ಮುಗ್ಧಾಂಗನೆ ಕರೆವಳೆನ್ನ ಕೂಗಿ
ಅಡುಗೆ ಮನೆಯ ಹುಡುಗಿ
ನಡುತೀರದಿ ದುಡಿಯುವಳು
ಕಿರು ನೋಟದ ಅನಿ ದನಿಗೆ
ನಾ ಜಗದ ದನಿಯ ಹುಡುಗ
ನನ್ನೀ ಬೇಸರಕೆ ೨೦ರ ಕಾವ್ಯವ ತಂದು
೭೦ರ ನಿಧಿಯಲಿ ಮಲಗಿದಾಗ
ಮರೆಯಲರಿತು ತಿಳಿದಳು ಲೋಕ ಜ್ಞಾನ
ಮುಂಜಾನೆಗಳು ಕಳೆದಂತೆ ಬಾಗಿಲ ತೆರೆಯಲಿ
ಹೊಸದಿಗಂತದ ಕೊಂಕು ಬಾಣ ಎನ್ನ ತಾಣ
ಪ್ರಶ್ನೆಯಾದಳು ಉತ್ತರದ ಪುಟದಲಿ ತೂಕಪ್ರಾಣ
ಇಂದು ಏಕೋ ಬಂಧುಮತಿ ಓರೆಗಣ್ಣು
ನಾಳೆಗಳು ಇಂತಿಲ್ಲ ಕಲ್ಪನೆಯ ಕಾಣು
ಹೊಸಿಲಲಿ ರಸವಂತಿಕೆಯ ದಿಶಾ ದಾರಿ
ನಾಲ್ಕು ದಿಕ್ಕುಗಳ ಕಟ್ಟಿ ಸಗ್ಗವಾಗುತ
ನನ್ನೆಲ್ಲಾ ಸವೆದ ಶತಮಾನಗಳ
ಭಾವವನು ಕೂಡಿ ಲೆಕ್ಕವೇಳು!
ರಸವಾಗಲಿ ಈ ಕಬ್ಬಿಗನ ಬಾಳು..
ನನ್ನ ಕೃಷ್ಣೆ

ನಲ್ಲೆ ಕೇಳುಮನಸು ಏಕೋ

ಕಾರ್ಮೋಡದ ಮುಗಿಲು

ಅಲ್ಲಿ ಬರುವ ನಾನು ನಿನ್ನ ಕಂಡು

ನಗಲು ನೀ ತಂಪಾದ ಹಗಲು

ಕೇಳು ನನ್ನ ಪ್ರಶ್ನೆ ; ಹೇಳು ನನ್ನ ಕೃಷ್ಣೆ ?

ನೋವೇ ಇರದ ಜಗದ ಸುಖವು ಯಾವುದೆಂದು?

ಸವಿ ನಲ್ಲನೆ ಕೇಳು

ಮನವ ಮುತ್ತಿ, ಪ್ರೇಮ ಸುತ್ತಿ

ಜಗದಿ ಸಂಸಾರ ಸುಖವು ಎಂದಳು

ಎನ್ನ ನಲ್ಲೆ ನಿನ್ನ ನಲುಮೆ ಅದೆಷ್ಟು ಭಾರ

ಅಷ್ಟೇ, ಈ ನಾಲ್ಕು ದಿಕ್ಕಿನ ವಿಶ್ವಸಾರ!

ಬಾ ವಸಂತಕೆ ನನ್ನ ನರ್ತಿಸುವೆ ನೀ ಸೂತ್ರಧಾರ!

ವಸಂತದ ಅನಂತ ಅರ್ಥಗಳು ಸಾವಿರಾರು ವ್ಯಾಖ್ಯಾನಗಳನ್ನು ಸೃಜಿಸಿ, ಮಾರ್ಗದರ್ಶಿಯಾಗಿವೆ. ಇಲ್ಲಿ ಗಂಡು ಹೆಣ್ಣು ಎಂಬ ಕಲ್ಪನೆಯೇ ನೆಪವಾಗಿದೆ. ನಾವು ವಸ್ತು, ಪ್ರಾಣಿ, ಪಕ್ಷಿಗಳೊಂದಿಗೂ ವಸಂತದ ಅರ್ಥಗಳನ್ನು ಹುಡುಕಿದ್ದೇವೆ. ಮನುಷ್ಯನಿಂದು ಮಾಯಾಜಾಲದ ಒಂದು ಹುಳು. ಪ್ರೇಮಕ್ಕೆ ಸಂವಾದವಿಲ್ಲದ ಕಾಲದಲ್ಲಿ ಸಂಬಂಧಗಳ ಸಹಜತೆಯನ್ನು ಹುಡುಕಬೇಕಿದೆ. ಕಾಲಕ್ಕೂ ವಿರಾಮಬೇಕಿದೆ.

ವಸಂತಕ್ಕೆ ಕರೆಯುವಾಗ ನಲ್ಲನಲ್ಲೆಯನ್ನು ಗಂಡಹೆಂಡತಿಗೆ ಸೀಮಿತವಾಗಿ ಗ್ರಹಿಸಬಾರದು. ಪ್ರತಿಮನಸ್ಸಿನಲ್ಲೂ ನಲ್ಮೆಯಿರುತ್ತದೆ. ಬದುಕಿನ ನಿತ್ಯ ದ್ವಂದ್ವಾರ್ಥದಲ್ಲಿ ತಿಳಿಸಾರದ ವಿಚಾರಕೆ ನಮ್ಮ ಮನಸ್ಸು ಸಿದ್ಧವಾಗಬೇಕಿದೆ. ಎಲ್ಲಿ ಮಧುರತೆಯಿದೆಯೋ ಅಲ್ಲಿ ಅನಂತದೀಕ್ಷೆಯಿದೆ. ಒಲವು ತಾನಾಗಿಯೇ ಮೂಡಿ, ಪ್ರತಿ ಮನಸ್ಸೂ ನಲ್ಮೆಗೊಳ್ಳುತ್ತದೆ.

## ನಾಚಿದಾಗ

ಬೆಳಕು ನಾಚುವ ಹೊಳಪು
ಕಾವ್ಯ ಕೆನ್ನೆಗೆ ತಾಗಿ ತಾ ಬಾಗಿ
ಬದುಕು ಕಂಡಿತೇಳು ರೂಪು
ತನ್ನಾಸೆಯ ಮನಕಲ್ಪನೆಯ ಕೂಸು
ಚಿತ್ರವಾಗುವ ಹತ್ತಿರಕೆ ಚಿತ್ತಾರದಿ ತಾಸು
ಬಣ್ಣವದೆಷ್ಟು ಚೂಪು ಕಣ್ಣಕುಡಿಗೆ,
ಚೆಲ್ಲಿ ಚೆದುರಿದೆ ಸಣ್ಣ ಗುಡಿಗೆ
ವಸಂತವಾರಿಧಿಯಲಿ ದಿಗಂತ ಕಣ್ಣನು ತೆರೆದು
ಅಂಕುರಿಸೋಣ ತೈಲವನು ಈ ಬದುಕ ಗಾಣಕೆ
ಮುಧಗೊಂಡು ಹೊಸ ರೂಪವಾಗಿ
ಶೃಂಗಾರ ಸೇವೆಯಲಿ ನಲ್ಮೆ ಆಹ್ವಾನವಿದೆ
ಸಹೃದಯ ಭಾವ ತಂತಿಯ ನಾಳೆಗಳು
ಮಿಡಿಯುತಿಯುವೆ ಬಾ ವಸಂತಕೆ..

**ಇದೇ ಸುಖ**

ಬದುಕೆಂಬ ಊರಿನಲ್ಲಿ
ವಸಂತದ ಸೂರುಕಟ್ಟಿ,
ಅಲ್ಲಿ ನಾನು ಇಲ್ಲ ನೀನು ಇಲ್ಲ
ಏಕಿಂತು ನಲ್ಮೆ ಈ ಬಾಳ್ವೆ!
ಇಲ್ಲವೇ ಹೊಸತೆಂಬ ನಿಲುವು
ನಾವೇ ಕಟ್ಟಿಕೊಳ್ಳುವ ಒಲವು
ಕತ್ತಲೊಂದು ಕಲ್ಪನಿದ್ದೆಗೆಟ್ಟು
ಬೆಳಕೆಂಬ ಸಂಕಲ್ಪ ಶುದ್ಧವಿಟ್ಟು
ಎರಡು ಜೀವದ ಚೆಲುವು
ವಿಶ್ವಾತೀತತೆಯ ನೆರಳ ಗೆಲುವು
ಮುಡಿಸೇರುವ ಬಾ ಮುದ್ದು
ಭಾವದಲಿ ದಾರಿ ತೆರೆದು
ನೀ–ನಾ ಬರುತ ನಾ–ನೀ ಇರುತ
ಲೋಕ ದಾರಿಯಾಗುವ ವಸಂತ ಪ್ರೇಮದಿ..

ಪ್ರೇಮವೆಂಬುದು ಪದಗಳ ವೈಭವ ಸುಖವೇ ಹೊರೆತು, ನಿಜ ಜೀವನದ ಅರ್ಥವಲ್ಲ ಎಂದು ಅದೆಷ್ಟೋ ಮಂದಿ ಗೊಣಗುತ್ತಲೇ ಪ್ರೇಮದ ಸಾರವನ್ನು ಸವಿಯದೇ ಕಾಲಕಳೆಯುತ್ತಿದ್ದಾರೆ. ಪ್ರೇಮವೆಂದರೆ ಹೆಣ್ಣು–ಗಂಡಿನ ಕಾಮಾಭಿವ್ಯಕ್ತಿಯ ಸನಿಹ ಸುಖವಷ್ಟೇ ಅಲ್ಲವೆಂಬ ಅರ್ಥಗಳನ್ನು ವಿಸ್ತರಿಸಿಕೊಳ್ಳಬೇಕಿದೆ. ಪ್ರೇಮದ ವಿಸ್ತಾರವು ನಾವು ನಿತ್ಯ ವಿಕಾಸಗೊಳ್ಳಲು ಹಪಾಹಪಿಸುವ ಸಂಚಾಲಕ ಶಕ್ತಿ. ಪ್ರಕೃತಿಯಿಂದ ನಾವು ಈ ಸತ್ಯವನ್ನು ಕಲಿಯಬೇಕಿದೆ. ಅದೊಂದು ಏಕಾಂತದ ತಪಸ್ಸಿನ ಫಲ. ಎಲ್ಲರೂ ಪ್ರೇಮವನ್ನು ಏಕಾಂತವಾಗಿಯೇ ಪಡೆದು, ಹಂಚುವ ಭಾವದಲ್ಲಿ ಸ್ಫೂರ್ತಿಗೆ ಸೋಲುತ್ತಾರೆ.

## ಬದುಕೆಂದರೆ...

ಬದುಕೆಂದರೆ
ಬಣ್ಣದ ಸವಾರಿ
ಕಣ್ಮನವೆ ಅದರ ಪ್ರೇಮ
ತಿಜೋರಿ.
ಆರಂಭ ತಿಳಿಸಾರ,
ಪ್ರಯಾಣ ಗಂಭೀರ!
ಸ್ನೇಹ–ಪ್ರೀತಿ–ಗೌರವಗಳನೆಲ್ಲಾ
ಹೊತ್ತು ಸಾಗುವ ಪ್ರವರ
ಕೆಲವರು ಇಳಿದು ಸಾಗುವರು
ಹಲವರು ಹತ್ತಿ ನೆನೆಯುವರು
ಬಲ್ಲವರು ಜೊತೆ ಬರುವರು
ಹೋಗೋಣ ಬಾ
ಬದುಕೆಂದರೆ
ಬಣ್ಣದ ಸವಾರಿ
ಕಣ್ಮನವೆ ಅದರ ಪ್ರೇಮ
ತಿಜೋರಿ.

ಬದುಕಿನ ವ್ಯಾಖ್ಯಾನಗಳು ಹಲವು. ಅನುಭವವೇ ಅದರ ಸೂಕ್ಷ್ಮಗನ್ನಡಿ. ಎಲ್ಲರೂ ಸಾಗುವ ಸುದೀರ್ಘ ಕನಸಿನ ಕೈಗಡಿಯಾರಕ್ಕೆ ಹೃದಯವೇ ಕಾಲತಂತು. ಅರ್ಥ ಅನರ್ಥಗಳನ್ನು ತೆರೆದಷ್ಟೂ ಮೌನ ಉತ್ತರವಾಗುತ್ತದೆ. ಇಂತಹ ಪ್ರಯಾಣಕ್ಕೆ ಹನಿಯಷ್ಟಾದರೂ ಒಲವು ಬೇಕು. ಅದು ಚೆಲುವಿನ ಕಣಜವಾಗಿ ಹನಿ ಅನಿಯಬೇಕು.

## ಸಖಿಯಾ ಸಖನೇ..

ನೀನು ನನ್ನೊಳಗೊ
ನಾನು ನಿನ್ನೊಳಗೊ
ಹರಿಯೇ ನಾ ಅರಿಯೆ

ಭಾವ ಮನದೊಳಗೋ
ಮನವೇ ಭಾವದೊಡಲೋ
ಈ ಏಕಾಂತವು ಸರಿಯೇ...!

ನೆನ್ನೆಗಳ ನೆನಪಿನಲಿ
ನಾಳೆಗಳ ಕನಸಿನಲಿ
ಗಾಡಿಯಾರದ ಹೆಜ್ಜೆ ಗುರುತು
ಬಾಳು ನೀನು ಅರಿತು
ನಿನ್ನ ನೀನೇ ಮರೆತು...

ಪುಣ್ಯ-ಪಾಪಗಳ, ಶಾಂತಿ-ಹಿಂಸೆಗಳ
ಲೆಕ್ಕವೇ ನಮಗೆ ದುಃಖ
ಮೂರು ದಿನಗಳ ಈ ಸುಖ
ಕೇಳೋ ಸಖನೇ, ಸಖಿಯಾ ಸಖನೆ...

ಜೀವದೊಳಗಿನ ಜೀವವನ್ನು ಕಾಲದೊಳಗಿನ ಕಾಲದ ನೇಪತ್ಯದಲ್ಲಿ ಹುಡುಕಾಡುವುದು ಮನಸ್ಸಿನ ಲಕ್ಷಣ. ಈ ಭಾವನೆಯೂ ಹೀಗೆಯೇ. ತನ್ನೊಳಗೆ ಅನಂತ ಪ್ರಯಾಣವನ್ನು ಸದಾ ಹಪಾಹಪಿಸುತ್ತದೆ. ತನ್ನೊಳಗಿನ ಸಖಸಖಿಯನ್ನು ಸಂವೇದನೆಗೊಳಿಸಿಕೊಳ್ಳುವ ಸಹಜತೆಯ ಸೂಕ್ಷ್ಮವನ್ನು ಮನಸ್ಸಿನ ಬಯಲುಬನದಲ್ಲಿ ಸದಾ ಹುಡುಕುತ್ತೇವೆ.

## ಇವಳು ಪಾರಿಜಾತ

ಮುಂಜಾನೆ ರಾಗದಲ್ಲಿ
ಮೌನದಲ್ಲಿಯೇ ಕರೆಯುವ
ಮುಗ್ಧ ವೀಣೆ ಇವಳು.

ಆ ಕಣ್ಣು ತಾರೆ ಚಂದಿರನ ನೀರೆ
ಬರೆವ ಓಲೆಯ ಸಾಲು
ಒಲವು ದೋಣಿಯ ಸೆರೆ

ಇರಬಹುದು ಇನ್ನಷ್ಟು
ಪ್ರೇಮ ಸುಧೆಯ ಬಿಂಬ
ಅರಳುವ ದೀಪ ಮೌನದಲ್ಲಿ

ದೇವತೆಗಳೇ ನಿದ್ರಿಸುವ
ನೀಲ ರಾತ್ರಿಯ ತಂಪು
ನಿನ್ನ ಹೂ ಜಳಕದ ಕಂಪು

ರವಿಯು ಕಾಂತಿಯ ತಂದು
ಇಬ್ಬನಿಯ ಬೆಳಕಲಿ ಕಂಡು
ಓ ಪಾರಿಜಾತ ನನ್ನಲಿ ಅಂಕುರಿಸಿದೆ.

ಪಾರಿಜಾತದಂತಹ ಶ್ರೇಷ್ಟ ಪರಿಮಳವು ಮುಂಜಾನೆಗೆ ರಾಗವಾಗಿ ತನ್ನ ಪ್ರಯಾಣ ಮುಗಿಸುತ್ತದೆ. ಕತ್ತಲು ಅದರ ದೈವೀಶಕ್ತಿ. ಈ ಒಲವು ಕೂಡ ಹೀಗೆಯೇ. ಮುಗ್ಧಮೌನದ ಪ್ರಯಾಣದಲ್ಲಿ ಪರಸ್ಪರ ಹೃದಯಸ್ಪಂದನವಾಗಿ ಪರಸ್ಪರ ಜೀವಗಳನ್ನು ಕಂಪಿಸುತ್ತದೆ. ಬೆಳಕಿನಲ್ಲಿ ಮಾಯಾವಾಗುತ್ತದೆ.

## ಕಣ್ಣು ಹನಿ

ಸಖಿ,
ಕಣ್ಣೆಂಬ ಕ್ಯಾಮರಾದಲ್ಲಿ
ಕ್ಲಿಕ್ಕಿಸು
ಮನದಾಸೆ ತೀರುವ ತನಕ
ಪ್ರತಿಕ್ಷಣವೂ
ಹೃದಯ ನಕ್ಷೆಯಲಿ
ಹೊಸರೂಪ, ಹೊಸಭಾವ
ನವನವೋನ್ಮೇಷಶಾಲಿನಿ...
ಕಣ್ಣಿಗೂ ಮನಸಿಗೂ
ನಂಟು ಮೂಡುವಾಗ
ನಿನ್ನ ನುಡಿ ಚೆಲುವು
ಕಾಣ್ಕೆಯಾಗಿ
ದೇಹವನೆ ಕಂಪಿಸಿತು
ನೋಟದಲ್ಲಿ

ಹುಟ್ಟಿದ್ದು ಒಲವಾಗಿ
ಬೆಳೆದದ್ದು ಚೆಲುವಾಗಿ
ತೃಪ್ತಿಗೆ ಕಣ್ಣೀರು ದೀಪ್ತಿಯಾಗಿ
ವಸಂತಕೆ ಬಾ ಒಲವಿನಿಂದ

ಪ್ರೇಮದಲ್ಲಿ ಕಣ್ಣಿನ ಇತಿಹಾಸವು ತುಂಬಾ ಇದೆ. ಅದು ಪರಿಚಯದ ಮೊದಲ ಹೆಜ್ಜೆಯಲ್ಲಿ ಭಯಪಡುತ್ತದೆ. ಪರಿಚಯದಲ್ಲಿ ನಾಚುತ್ತದೆ ತನ್ನ ಅನಿಸಿಕೆಗಳನ್ನು ಅಪೇಕ್ಷಿಸುತ್ತದೆ. ಪರಿಚಯದ ನಂತರ ಕಣ್ಣಿನ ನಿರೀಕ್ಷೆಗಳೇ ಭರವಸೆಯಲ್ಲಿ ಸಾಗುತ್ತವೆ. ಅಂತಿಮವಾಗಿ ಗೆಲುವಿಗೂ, ಸೋಲಿಗೂ ಕಣ್ಣೀರನ್ನೇ ದಾನಮಾಡುತ್ತದೆ. ಕಣ್ಣು ತೃಪ್ತಿಯ ಸಂಕೇತ. ನೋಟದಲ್ಲಿ ಬೆಳಕನ್ನೂ, ಮೌನದಲ್ಲಿ ಶಾಂತಿಯನ್ನು ತುಂಬುವ ಸಾಕ್ಷಿಪ್ರಜ್ಞೆ.

ಮನಸ್ಸು ನಮ್ಮ ಎಲ್ಲಾ ಕ್ರಿಯೆಗಳ ಸೇತುವೆ. ದೇಹವು ಕಾರಣ ಸಾಧನವಾದರೆ, ಮನಸ್ಸು ಅದರ ಕಾರ್ಯಕ್ರಿಯೆ. ಈ ಮನಸ್ಸಿನಲ್ಲಿ ಮೂಡುವ ಒಲವು ನಲ್ಲನಲ್ಲೆಯ ಅನಂತಪ್ರಣಯಕ್ಕೆ ಸಾಕ್ಷಿಯಾಗುತ್ತದೆ.

**ತನು ಮನ**

ಮನದತ್ತಿರಕೆ
ಮನದೆತ್ತರಕೆ
ಮನದುತ್ತರಕೆ
ಮಾತನಾಡುವ ಮನವೆ
ಮೌನವನು ಬಿಚ್ಚಿ
ಮನವನ್ನು ಮೆಚ್ಚಿ.
ತನು ತೆರೆದು
ಮನ ಬರೆದು
ನೀ ಇರುವ
ಇರುವೇ ಮನಕೆ
ಮೌನದ ಮಹಿಮೆ
ಮನದಂಗಳಕೆ
ನಿನ್ನಿರುವುಗಳ
ಚಿತ್ರ ಚಿತ್ತಾರದಲಿ
ಬರೆದು ಹರಸು
ಅದರಲ್ಲಿ ಎನ್ನ
ಮನವ ಬೆರಸು
ಒಲವಿನಲಿ ಹಾರೈಸು.

ಒಲವು ಮನಸ್ಸಿನ ಔಷಧಿ. ತುಂಬಿಕೊಂಡವರಿಗೆ ಚಿಕಿತ್ಸೆ. ಅದು ಹತ್ತಿರವಾಗುವ ಬಗೆಯಲ್ಲಿ ಮನಸ್ಸು ಸದಾ ತುಡಿತದಂತೆ ಕೆಲಸಮಾಡುತ್ತದೆ. ಜೀವ ನಿರ್ಜೀವಗಳ ಭೇದವಿಲ್ಲದೆ ಒಲವಿನ ಆಮಂತ್ರಣಕ್ಕೆ ಮನಸ್ಸು ಜಾರುತ್ತಿರುತ್ತದೆ.

**ಬದುಕೆಂದರೆ ಹೀಗೆ..**

ಬಣ್ಣಬಣ್ಣದ ದೋಣಿಗಳ ಹಾಗೆ,
ಯಾವ ದೋಣಿ ಜೊತೆಯಾಗುವುದೋ..
ಯಾವುದು ಕಥೆಯಾಗುವುದೋ..
ಯಾವುದು ವ್ಯಥೆಯಾಗುವುದೋ..
ಸಾಗುವಾಗ ತಿಳಿಯುವುದು
ಸರಿಯೆನಿಸುವ ವಿಚಾರ!
ಸೋಲುವುದನ್ನು
ಕಲಿಯೋಣ ಬಾ..
ಗೆಲುವಲ್ಲಿ ಸರಿಯಷ್ಟೇ
ನಮ್ಮ ಹಿರಿಮೆಯ ತವಕ
ಸೋಲಿನಲಿ ತಪ್ಪುಗಳು
ನಮಗೆ ನಾವೇ ಅರ್ಥ ಪದಕ.

ನಾ ನಿನಗೆ ನೀ ನನಗೆ
ಸೋಲುವುದೇ ಗೆಲುವೆಮಗೆ

ಸೋಲುಗಳನ್ನು ಹೇಳಿಕೊಡುವ ಒಲವು ಮೊದಲ ಹೆಜ್ಜೆಯಲ್ಲಿಯೇ ಗೆಲುವು ಸಾಧಿಸಿರುತ್ತದೆ. ನಮ್ಮೊಳಗಿನ ಅಹಂಕಾರವನ್ನು ನಾವು ನಾಶಮಾಡಿಕೊಂಡಷ್ಟೂ ನಮ್ಮ ಒಲವು ಪ್ರಕಾಶಿಸುತ್ತದೆ. ನಾವು ಇಲ್ಲಿ ನೆಪವಷ್ಟೆ. ನಮ್ಮ ಒಲವಿನ ಕಾರ್ಯಗಳೇ ಅನಂತ.

# ನಲ್ಲ ನಲ್ಲೆಯ ವಸಂತ

ನಲ್ಲ ನಲ್ಲೆಯ ವಸಂತ
ನಲ್ಲೆಯೊಲವಿನಲಿ
ನಲ್ಲನು ಸೃಷ್ಟಿಪನು
ಪ್ರಕೃತಿಯೇ ಇವರಿಗೆ ಪಾಠಶಾಲೆ

ನಿಮ್ಮೊಳಗೂ ಇರಬಹುದು
ಹುಡುಕಿ ಒಂದೊಮ್ಮೆ
ಇರಲಿ ನೋವುಗಳ ಶೂಲೆ
ಹದವಾಗಬೇಕಿದೆ ಮನದ ನಾಲೆ

ನೋವು, ಸಾವುಗಳೆಲ್ಲಾ
ಪ್ರಕೃತಿಯ ಚಕ್ರದಲಿ
ಋತುವಾಗಿ ಬಂದಿಹವು
ಪ್ರೀತಿಸು ಎಲ್ಲವನು ಒಲವಿನಿಂದ
ನಲ್ಲನೆಂದರೆ ನೀನೆ
ನಲ್ಲೆಯೋ ನಿನ ಮನವು
ಪದವಿಟ್ಟು ಹದಗೊಳಿಸಲು
ಬಾ ವಸಂತಕೆ...

ನಲ್ಲ ನಲ್ಲೆಯ ವಸಂತ ಇದೊಂದು ಮನಸ್ಸನ್ನು ಮಧುರಗೊಳಿಸಿಕೊಳ್ಳಲು ಚಿಕ್ಕ ದೀಪಿಕೆ. ಪ್ರೇಮವೇ ಪೂರ್ಣ ಆವರಿಸಿರುವ ಒಲವಿನ ಕೈಪಿಡಿ. ಹೆಣ್ಣು ಗಂಡುಗಳ ಹೊಸ ವ್ಯಾಖ್ಯಾನವು ಇಲ್ಲಿದೆ. ಹುಟ್ಟಿದಂದಿನಿಂದ ಒಲವಿಗಾಗಿ ಹಂಬಲಿಸುವ ಜೀವ, ಬದುಕೆಲ್ಲಾ ಒಲವಿನ ಹಪಾಹಪಿಯಲ್ಲೇ ಸವೆಸಿ, ಅಂತಿಮವಾಗಿ ಒಲಿವಿನಿಂದಲೇ ಕಣ್ಮುಚ್ಚುತ್ತದೆ. ಇಂತಹ ಒಲವು ಓದುವಿನೊಂದಿಗೆ ನಮಗೆಲ್ಲಾ ಸಿಗಲಿ. ಅನುವಾದಗಳ ಮೂಲಕ ವಿವಿಧ ಭಾಷೆಗಳಿಗೆ ಪ್ರವೇಶ ಪಡೆದು ವಿಶ್ವದ ಸರ್ವರನ್ನು ತಲುಪಲಿ. ಭಾವವಿಕಾಸವಾದಷ್ಟೂ ಒಲವು ನಿರ್ಮಲಗೊಳ್ಳುತ್ತದೆ.

ಕಾವ್ಯ    ನಲ್ಲನಲ್ಲೆಯ ವಸಂತ

ಕವಿತೆ, ಕಥೆ, ಕಾದಂಬರಿ, ಮಹಾಕಾವ್ಯ ಮೊದಲಾದಂತೆ ಇದುವರಗಿನ ನಿಯಮ ಚೌಕಟ್ಟುಗಳ ಮೀರಿ ಇಂದು ಸಾಹಿತ್ಯವು ಹೆಜ್ಜೆ ಇಡುತ್ತಿದೆ. ಸಹೃದಯ ಮನಸ್ಸು ಬರಿ ಓದುವಿಗೆ ತೊಡಗದೆ, ತನ್ನ ಬದುಕಿಗೆ ಸಾಹಿತ್ಯದ ಅನಿವಾರ್ಯತೆಯನ್ನು ಕಂಡುಕೊಳ್ಳುತ್ತಿದೆ.

ಇದುವರೆಗಿನ ಸಾಹಿತ್ಯವನ್ನೂ ಕೂಡ ಜೊತೆಯಲ್ಲಿರಿಸಿಕೊಂಡು, ಹೊಸ ರೀತಿಯಲ್ಲಿ ಅಧ್ಯಯನಕ್ಕೆ ತೊಡಗಿರುವ ನಾವುಗಳು ವರ್ತಮಾನದ ಎಲ್ಲಾ ಗ್ರಹಿಕೆಗಳನ್ನು ಮುಕ್ತ ವೇದಿಕೆಗಳಾಗಿ ಸ್ವೀಕರಿಸಿ, ಹೊಸ ಆಲೋಚನೆಗಳನ್ನು ಕಂಡುಕೊಳ್ಳುತ್ತಿದ್ದೇವೆ.

ನುಡಿಗಳು ಬದಲಾವಣೆಯಲ್ಲಿ ತೊಡಗಿವೆ. ಇಂದು ಬರಹ ಹಿರಿದಾಗುತ್ತಿದೆ. ಅದರ ಅಕ್ಷರಗಳು ವಜ್ರಗಳಾಗುತ್ತಿವೆ. ನೆನಪುಗಳು ಅತಿ ಬೇಗ ಮಾಸುವ ವೇಳೆ, ಅಳಿಸಬಹುದಾದ ಅಕ್ಷರಗಳನ್ನು ನೆನಪುಗಳಿಂದ ಅಳಿಸದಂತ ಉಳಿಸುವ ಸಾಹಿತ್ಯ ರಚನೆಯು ನಮ್ಮ ಮುಖ್ಯ ಜವಾಬ್ದಾರಿಯಾಗಿದೆ. ಇದು ಭೂತಕಾಲದ ಕನಸು. ವರ್ತಮಾನದ ಅನಿಸು. ಭವಿಷ್ಯತ್ತಿನ ಸಾಕ್ಷಿಪ್ರಜ್ಞೆ.

ಆಂಕುರ


ISBN 978-93-5773-793-7
9 789357 737937

# ನಲ್ಲನಲ್ಲೆಯ ವಸಂತ

## ಅಂಕುರ

ಒಲವಾಗುವ ಮನಸ್ಸಿನ ಬಾಳ್ವೆಯು
ಕಾಲ - ದೇಶ -ಲಿಂಗಗಳ ಮೀರಿ
ಹದವಾಗುವ
ಪ್ರಕೃತಿಯ ಪರಿಯೇ ನಲ್ಲ ನಲ್ಲೆಯ ವಸಂತ.
ಬದುಕು ಸಂಘರ್ಷಕ್ಕೆ ಸಿಲುಕುವುದಿಲ್ಲ. ನಮ್ಮ
ಆಸೆಗಳನ್ನು ವಿಸ್ತರಿಸಿಕೊಳ್ಳುತ್ತಾ ನಾವು ಅದರ
ಭಾಗವಾಗುತ್ತೇವೆ. ಈ ಬಹಿರಂಗದ
ತವಕಗಳನ್ನು ನಮ್ಮ ಅಂತರಂಗದಲ್ಲಿ
ಸೋಸಿ ಶುದ್ಧವಾಗಲು ಒಲವು ಬೇಕು. ಅದು
ಮನಸ್ಸಿನ ಧಮನಿಯಾಗಬೇಕು.

